# ಆಗು ಬೆಳಕ ಚುಕ್ಕಿ

ಲಕ್ಷಲಕ್ಷ ದಶಲಕ್ಷ ಕೋಟಿ ಕೋಟ್ಯಂತರ ಲಕ್ಷಿತ
ಸೌರಮಂಡಲ ಗ್ರಹ ತಾರಾ ನೀಹಾರ ಪರಿವಾರ ವಿಶ್ವಸಂಪುಟದಿ
ಮಾನವನ ಸ್ಥಲವೀ ಭೂಮಂಡಲವೇನೆಂದರಿವೆ?
ಬರಿ ಚುಕ್ಕಿ !

ಭೂಮ ಭೂಮ ಭೂ ಮಂಡಲದಲ್ಲಿ
ನೀನೋ?
ಕೇವಲ ಕಿಕ್ಕಿರುಚುಕ್ಕಿ !

ಬೆಳಗುವ ತೊಳಗುವ ಬಲು ದೂರದ ಆ ಚುಕ್ಕಿಗಳು
ಬಲು ನಿಡುಗಾಲದ ಬೆಳಕಿನ ಬಳುವಳಿಯಾಂತು
ಅನಾದಿ ಬಸುರೊಳಗನಂತ ಸತ್ತ್ವವ ಹೊತ್ತು
ಯುಗ ಯುಗದಾಚೆಗೆ ಬೆಳಕನು ನೀಡಿ
ಖಗ ಖದ್ಯೋತಗಳೆನಿಸಿ
ನಿಯತಿಯ ಗತಿ ಗಂತವ್ಯದೊಳನುಗೂಡಿ
ಅಶ್ರುತಗಾನವ ಪಾಡಿ, ಪಾತ್ರವನಾಡಿ
ತೋರುವ ಭವ್ಯಮಹೋನ್ನತ ಲಯ ವಿನ್ಯಾಸದಲಿ
ನಿತ್ಯಜ್ಯೋತಿಃಪಟಲದಲಿ
ನೀನೇನು?
ಕೇವಲ ಮಸಿ ಚುಕ್ಕಿ !

ಬೆಳಕಿನ ಬರಹದ ಸಾಲಲಿ ಕಾಣದೆ ಮುಳುಗಿಹ
ಮಸಿ ಚುಕ್ಕಿ;

ಕಂಡೊಡನೆಯೆ ಕಣ್ಮರೆಯಾಗುವ ಚುಕ್ಕಿ !
ಏತಕೆ ಮೆರೆಯುವೆ ಸೊಕ್ಕಿ ?
ಮೆರೆಯುವೆ ಕುಣಿಯುವೆ ಹಾರಾಡುವೆ ನೆಗೆಯುವೆ
ದಡದಡ ಧುಮ್ಮಿಕ್ಕಿ ?

ಚುಕ್ಕಿಯನೇ ಮುಕ್ಕುವ ರಕ್ಕಸನ
ತುಳಿತಕೆ ಸಿಕ್ಕಿದ ನೀ ಕೀಟ :
ತಿಕ್ಕಿತೀಡುವನು ಕಣ್ಣ ಮಿಟುಕಿನಲಿ–
ಏತಕೆ ಈ ಪರದಾಟ ?

ಮಂಗಳದಂಗಳಕೇರಿದರೇನು,
ಚಂದ್ರನನ್ನೆ ಸೃಜಿಸಿದೊಡೇನು ?
ಕಂಗಳ ಮುಚ್ಚುವೆ, ಕತ್ತಲೆ ಕಡಲೊಳ–
ಗಾಳುವೆ,–ನಗುವನು ಭಾನು.

ಅಣುವ ಸೀಳಿಯದ್ಭುತವನು ಗೈದುದ್–
ಭೂತವಮಾಡಿರುವೆ, ಎಲೆ ಚದುರ,
ಕುಣಿಯುವ ಮೋಹಿನಿಯನ್ನವಳೊಲಿಯೆ
ಕುಣಿವೆ ಮಣಿವೆ ಭಸ್ಮಾಸುರ !

ಭಯ ಭೀತನಾಗು ನಯ ನೀತನಾಗು
ವಿಶ್ವದತುಲದೆದುರು ;
ಲಯಹಿಡಿದು ವಿಶ್ವಮಯನಾಗು, ನಿನ್ನ
ಕತ್ತಲೆಕೆಳೆಯನು ನೀಗು.

ಬೆಳ್ಳಂಬೆಳಕಿನ ಚುಕ್ಕಿಯು ಕಡಲಲಿ
ಆಗು ಬೆಳಕ ಚುಕ್ಕಿ :
ಸುಳ್ಳಿನ ಕತ್ತಲೆ ಮುತ್ತಿರಲೇನು ?
ಹೊಳೆಹೊಳೆಯುವೆ ಉಕ್ಕಿ.

೪—೧೨—೧೯೫೬]

# ಮೇಘ ಲಿಂಗ

೧

ನೋಡ ನೋಡುತಿರೆ ಬಾನ ಬಯಲಿನಲಿ
ಮೂಡಿತೊಂದು ಲಿಂಗ:
ಕೂಡೆ ನನ್ನ ಬಗೆಯರಳಿ ಹೂವಾಗಿ
ಹೊಂದಿತದರ ಸಂಗ.
ಎಂದೂ ಕಾಣದಿಹ ನೋಟ ಕಂಡೆನ್ನ
ಹೃದಯ ಹಿರಿದು ಹಿಗ್ಗಿ
ಒಂದೆ ಭಾವದಲಿ ಮಿಂದು ಮುಳುಗಿರಲು
ಆಯ್ತು ನಲಿವ ಸುಗ್ಗಿ.

೨

ಏನು ಲಿಂಗವುತ್ತುಂಗ ಶಿಖರದೊಲು
ಬಾನ ನೆತ್ತಿ ಮುಟ್ಟಿ
ಭಾನುತೇಜಃಪ್ರಭಾವಳಿಯ ತಳೆದು
ಪೃಥ್ವೀಪೀಠ ಮೆಟ್ಟಿ
ದೆಸೆಯ ಕೊನೆಗಳನೆ ತಾಕಿ ಸರ್ವಕ್ಕೆ
ಸ್ವಾಮಿಯೆನಿಸಿ ನಿಂದು
ಎಸೆಯಿತೆದುರಿನಲಿ ಮೇಘಲಿಂಗವದು
ನನ್ನ ಕಣ್ಣ ಮುಂದು.

೩

ಅಂತೆಯಾಕ್ಷಣವೆ ಬಾನುಗೆಂಪಿನೆಡೆ
ಬಾಲಚಂದ್ರಮೂಡಿ,

ಕಂತುಹರನೆ ಕೆಂಜಡೆಯ ನಡುವೆಯೆನೆ
ಲಿಂಗವವನ ಸೂಡಿ
ಮೆರೆಯುತಿರಲು, ನಕ್ಷತ್ರನೂರರಳಿ
ಮೇಲೆ ಮಾಲೆಯಾಗಿ
ಪರಮಲಿಂಗಕರ್ಚನೆಯ ಗೈಯುತಿರೆ
ನಿಂತೆ ಶಿರವ ಬಾಗಿ.

೪

ಬಾಗಿ ಶಿರವ ಕಣ್ಮುಚ್ಚಿ ಮೈಮರೆತು
ನಿಂತೆ ಚಣದ ಕಾಲ;
ಹಾಗೆ ಕಣ್ಬಿಡಲು ಹೀಗೆ ಮುಸುಕಿತ್ತು
ಸುತ್ತ ತಿಮಿರಜಾಲ.
ಚಣದ ಹಿಂದಣನುಭವದ ನೆನಪಿನಲಿ
ನಿಂತೆ ಭ್ರಾಂತನಾಗಿ:
ನಾನು ಬಾನು ನನ್ನಂಗ ಲಿಂಗ ತಾ-
ಮೆಲ್ಲವೊಂದೆಯಾಗಿ
ಧ್ಯಾನದಲ್ಲಿ ಚಿನ್ಮಯತೆವಡೆದಿತ್ತು
ದ್ವೈತಭಾವ ನೀಗಿ.
ನನ್ನ ಎಚ್ಚರವೆ ತಿಮಿರವಾಯ್ತಲಾ,
ಎಲ್ಲವಳಿಸಿಹೋಗಿ.

೫

"ಧ್ಯಾನದಲ್ಲೆ ನಿಂತಿರುವ ಶಕ್ತಿಯಿರೆ
ಸ್ಥೂಲವಿರದೊಡೇನು
ನೀನೆ ಅದರಲ್ಲಿ ಅದುವೆ ನಿನ್ನಲ್ಲಿ
ಸೂಕ್ಷ್ಮ ತಾನೆ ತಾನು.

ನಿನ್ನ ಪುಣ್ಯದಿಂದಾದ ದರ್ಶನವು
 ಕಣ್ಗೆ ಮೇಘಲಿಂಗ :
ಕಣ್ಣ ಮುಚ್ಚಿಯನುದಿನವು ನೆನೆಯುತಿರೆ
 ಅಪ್ಪುದಾತ್ಮಲಿಂಗ.
ಕಣ್ಣ ಬಿಟ್ಟಿಯೇತಕ್ಕೆ ಮೂಢ ನೀ
 ಧ್ಯಾನವನ್ನು ತೊರೆದು?
ಚಿಣ್ಣ ! ಕೊರಗದಿರು : ಇಲ್ಲ ಸಾಧನೆಯೆ,
 ಇನಿತೆ ನಿನಗೆ ಹಿರಿದು.
ಕಣ್ಣ ಬಿಟ್ಟು ನಡೆ ; ಕತ್ತಲಾಗಿಹುದು ;
 ದಾರಿ ದೂರ ಮನೆಗೆ ;
ಹಣ್ಣುತಿರುಗೆ ಹೃದಯಕ್ಕೆ ಕಾಲವಿದೆ,
 ಅಪ್ಪುದೊಮ್ಮೆ ಕೊನೆಗೆ.
ತತ್ತ್ವವಿಂತಿಹುದು ; ಭ್ರಾಂತಿಯೇತಕ್ಕೆ ?
 ಕಾಯ್ವುದೊಳಿತು "—ಎಂದು
ಲತ್ವದಾಕಾರದೊಡಲ ನೀಗುತ್ತ
 ಕಾಣದಾದನಿಂದು.

೬

ಬಾರ ಬಾರ ಮನ್ಮನೋಮಂದಿರಕೆ
 ಬಾರ ಮೇಘಲಿಂಗ :
ತೋರ ತೋರ ನಿನ್ನಿರವ, ಮಾಡದಿರು
 ಆಶೆಗೆನ್ನ ಭಂಗ.
ಮಿಂಚುಮಾಲೆಯನೆ ಧರಿಸಿ ನಿಲ್ಲಯ್ಯ
 ಮನೋಗಗನದಲ್ಲಿ ;
ಪಂಚಭೂತಯುತ ದೇಹ ಜಡದಲ್ಲಿ
 ನಿನ್ನ ಚೇತ ನಿಲಲಿ.

ಮೊಳಗಿಸಯ್ಯ ವಿಶ್ವಾತ್ಮಘೋಷವನು
ಅಂತರಂಗದಲ್ಲಿ;
ಬೆಳಗು ಬೆಳಗು ನುಡಿಮಿಂಚ ಹರಿಸಿ ಮದ್-
ಭಾವರಂಗದಲ್ಲಿ.
ಸುರಿಸು ಆನಂದ ವರ್ಷ ತುಂದಿಲವ
ನನ್ನ ಬಾಳ ವನಕೆ;
ಅರಳಿಸಯ್ಯ ನನ್ನಾತ್ಮಪುಷ್ಪವನು:
ಅರ್ಪಿಸುವೆನು ನಿನಗೆ.
ವ್ಯಕ್ತನಾಗಿ ಅವ್ಯಕ್ತನಾಗಿ, ಸು-
ವ್ಯಕ್ತನೆನಿಸು ನನ್ನ,
ವ್ಯಕ್ತನಾಗಿ ಅವ್ಯಕ್ತನಾಗಿ ನಾ
ಹೊಂದುವಂತೆ ನಿನ್ನ.

# ಕಲ್ಲಡಿಯ ಹುಲ್ಲುಗರಿಕೆ

ಕಲ್ಲಡಿಯ ಹುಲ್ಲುಗರಿಕೆ :
ಅದಕಿಲ್ಲ ಹೆದರಿಕೆ
ಮೇಲೆ ಕೊಲೆಕುಳಿತ ಚಪ್ಪಡಿಯು
ಭಾರವಪ್ಪಳಿಸುತಿದೆಯೆಂದು.
ಕತ್ತಲೆಯ ಗೋರಿಗವಿ ಸಂದುಬಾಯಿಂದ
ಹೊರಹಾಕಿಹುದು ತಲೆಯ—ತನ್ನ ಹೊಸ ಬೆಳೆಯ
ಎಳೆಯ ಎಲೆಯ ತಲೆಯ :
ಏನದರ ಧೈರ್ಯಶೌರ್ಯ !
ಅದ ಮೆಚ್ಚಿ
ಬದುಕೆಂದು ಹರಸಿದನು ಸೂರ್ಯ,
ತುಂಬಿದನು ಆಯುಷ್ಯ,
ಅಪ್ಪುಗೆಯ ಬಿಸುಪಿತ್ತು ;
ಗಾಳಿ, ಬಾಳಿನ ಗೆಳೆಯ,
ಬಂದು ತಡವಿದ ಮೈಯ,
ಹೊಸ ಉಸಿರನಿತ್ತು.
ಮೈಯೊಲೆದು ತಲೆಕೊಡಹಿ
ನಿರ್ಭಯತೆಯಲಿ ನಲಿಯುತಿದೆ ಹುಲ್ಲುಗರಿಕೆ :
ಅದಕಿಲ್ಲ ಹೆದರಿಕೆ.
ಅಹುದು, ತೇನ ವಿನಾ ತೃಣಮಪಿ ನ ಚಲತಿ—
ಆದರೆ—
ಬಿದ್ದಾಗಲೆದ್ದು ನಿಲ್ಲುವ ಯತ್ನವಿಲ್ಲದಿರಲವನೂ
ಹಿಡಿಯ ಮೇಲೆತ್ತಿ.

೩—೩—೧೯೫೮

# ನೂರು ಹೂವು ಅರಳಲಿ

ನೂರು ಹೂವು ಅರಳಲಿ
ಒಂದೆ ವನದಲಿ ;
ನೂರು ಹಕ್ಕಿ ಉಲಿಯಲಿ
ಒಂದೆ ಮರದಲಿ.

ಅರಳುವ ಹೂವನು ಕಂಡು
ಹಕ್ಕಿ ಹಿಗ್ಗಲಿ;
ಹಕ್ಕಿಯ ದನಿ-ಹನಿ-ಮಳೆಯಲಿ
ಹೂ ಕಂಪಿಡಲಿ.

ಅದಕೆ ಇದು, ಇದಕೆ ಅದು,
ಒಂದೊಂದಕ್ಕಾಸರೆ;
ಮನವೊಂದೇ, ತನುವೊಂದೇ,
ನುಡಿತ ಮಿಡಿತ ಬೇರೆ.

ಬಗೆ ಬಗೆ ದನಿ ಬಣ್ಣಕೆ, ದಿಟ,
ಒಂದೆ ಆಕರ ;
ಅವನೊಂದೆನಿಸುವ ಜೀವದ
ಕೊಲೆ ಭಯಂಕರ.

ಜೀವ ಹೂವು ಹಕ್ಕಿಗಳಲಿ
ನೂರು ಮೆರೆಯಲಿ ;
ಸಾವ ಸೊನ್ನೆ ನಿಬ್ಬಯಲಲಿ
ಏಕವಾಗಲಿ.

ಏಕವನೇಕದಲಿ ತೋರೆ
ಅದೇ ಜೀವನ—
ನೂರು ಬಣ್ಣ ನೂರು ಕೊರಲು
ಕಲೆಯೆ, ಚೆಲುವು ವನ.

ನೂರು ಅರಳು ನೂರು ಕೊರಲು
ನೆರೆಯೆ ನಂದನ;
ಏಕೆ ಬೇಕು? ಸಾಕು ನೂಕು
ಏಕತ್ವದ ಬಂಧನ.

ಬಣ್ಣವೊಂದೆ—ಗೋಡೆಸುಣ್ಣ,
ಕರಿಮೋರೆಯ ಸಾದು;
ನೂರು ಕಾಗೆ ಸೇರಿ ಕೂಗೆ
ಗಾನವಾಗದು.

ಹೂವು ನೂರಕಿರಲಿ ನೂರು
ಬಣ್ಣದ ಮೆರುಗು;
ಹಕ್ಕಿಗಿರಲಿ ಹಲವಿಂಚರ
ತೋರುವ ಬೆಡಗು.

ಕಾಗದ ಹೂವಲ್ಲ—ಸದಾ
ಮೆರೆಯೆ ಧೂಳು ತುಂಬಿ;
ಭೋಗದ ಹೂ ಮಕರಂದದ,
ಬಂದು ಕುಡಿಯೆ ತುಂಬಿ.

'ಲೇಟ್ ಎ ಹಂಡ್ರೆಂಡ್ ಫ್ಲವರ್ಸ್ ಬ್ಲೂಮ್'
ಒಂದೆ ಹೂ ಬನದಲಿ;
ವಿವಿಧ ವರ್ಣ ರೂಪವಿರಲಿ
ಒಂದೆ ಹೂತನದಲಿ.

೨೦—೧೨—೫೭

[೧೯೫೭ರಲ್ಲಿ ಚೀಣದ ಅಧ್ಯಕ್ಷ ಮಾವೊ ತ್ಸೆ ತುಂಗರು, Let a hundred flowers bloom, let a thousand schools contend ಎಂದು ಅಭಿಪ್ರಾಯ ಸ್ವಾತಂತ್ರ್ಯದ ಹಾಗೂ ವಿಚಾರ ಸ್ವಾತಂತ್ರ್ಯದ ತಾತ್ಕಾಲಿಕ ಅವಕಾಶ ನೀಡಿ, ಆ ಧ್ಯೇಯವನ್ನು ಘೋಷಿಸಿದಾಗ ರಚಿಸಿದ್ದು.]

# ನಿನ್ನನೆ ನೀ ಗೆಲ್ಲು

೧

ಎಂದಿಗೆ ನಿಲ್ಲುವುದೀ ವೈಷಮ್ಯ ?
ಇರಲಿ ದೇವತ್ವ ;
ಸೇರ್ವೆವೆಂದು ಮಾನವತೆಯ ಗಮ್ಯ ?
ದೂರ ದೂರ ಗುರಿ,
ಬಲು ದೂರ.
ಗುರಿ ಮುಟ್ಟಲು ಬೆಲೆ ?
ಅಪಾರ, ಅಪಾರ !
ಇಲ್ಲವೊ ನಿಸ್ತಾರ ?

೨

ಸತ್ಯಕೆ ಪ್ರೇಮಕೆ
ನಿತ್ಯ ನೆಮ್ಮದಿಗೆ
ಕಾಣುವ ದೇವಗೆ
ಕಾಣದ ದೈವಕೆ
ಭಕ್ತಿಗೆ ಮುಕ್ತಿಗೆ
ಯುಕ್ತಿ ಯುಕ್ತತೆಗೆ
ಒಂದೇ ಸಿದ್ಧಿಗೆ
ಒಂದೇ ಬುದ್ಧಿಗೆ
ನಡೆದರೆಲ್ಲರೊಂದೇ ದಾರಿ,
ಒಂದೇ ಒಂದೇ ಅವರೆಲ್ಲರ ಗುರಿ :
ದೇಹವನರ್ಪಿಸಿ,
ರಕ್ತವ ತರ್ಪಿಸಿ,

ಶಿಲುಬೆಯ ಹೊತ್ತು
ಪ್ರಾಣವ ತೆತ್ತು
ದುಡಿದರು ಮಡಿದರು ಕೆಡೆದರು ಪಡೆದರು
ಭಕ್ತವೃಂದ ಕೋಟಿ;
ಹಿಂದುಳಿಯುವ ಹಿಂಬಾಲಕತನದಲಿ
ಇಲ್ಲ ನಮಗೆ ಸಾಟಿ!
ದಾರಿಯ ನಡೆಯದೆ ಗುರಿಯನು ಮುಟ್ಟುವ
ವಚೋನಿಷ್ಠ ಬುದ್ಧಿ!
ಸಾರಿಬರುವುದೇ ಪಥಚ್ಯುತರೆಮಗೆ
ಕ್ರಿಯಾಲಬ್ಧಿ ಸಿದ್ಧಿ!

೩

ಹಣ್ಣಿಗಾಗಿ ಹಾತೊರೆಯುವೆವು,
ಬಿತ್ತಿದ ಮೊಳಕೆಯ ಕಿತ್ತು;
ಭೀಮಸಾಹಸವ ಮಾಡುವೆವು,
ಬೆಟ್ಟಕೆ ಕಲ್ಲನು ಹೊತ್ತು.

ದೇವಪ್ರತಿಮೆಗೆ ಪೂಜೆಮಾಡುವ
ಪೂಜಾರಿ ನಮಗೆ ಮಾನ್ಯ;
ಭಾವ ತುಂಬಿ ಕಲ್ಲನು ಕಡೆದಿಟ್ಟ
ರೂವಾರಿ ನಮಗೆ ಶೂನ್ಯ.

ಎಲ್ಲರು ಸಮವೆಂದೆಂಬ ಮಂತ್ರಗಳ
ಹೊಸಹೊಸ ಪರಿ ಉದ್ಘೋಷಿಸುತ
ಸೊಲ್ಲಿನ ಸವಿ ಮಂಟಪದಲಿ ಮೈಮರೆ–
ವೆವು ಆತ್ಮವ ವಂಚಿಸಿಕೊಳುತ.

ಇಂದ್ರಲೋಕಕ್ಕೆ ಪಯಣವ ಬೆಳಸೆ
ಎನಿತೋ ಆದುವು ಯುಕ್ತಿ ;
ಚಂದ್ರಲೋಕಕ್ಕೆ ಹಾರಹೊರಟಿಹೆವು,
ಇಂತಾಯಿತು ಮಾನವ ಶಕ್ತಿ !

ಏನೋ ಹುಡುಕು, ಏನೋ ಬೆದಕು,
ನೀರಸವಾಯಿತೆ ಬದುಕು ?
ಮಕ್ಕಳ ಮುದುಕರ ಕೊಲ್ಲಹೊರಟಿಹರು ,
ಅಗ್ಗವಾಯಿತೇ ಬದುಕು ?

೪

ಒಲವಿನ ತಿಂಗಳ ಲೋಕಕೆ ಹಾರು,
ಹಗೆತನ-ಕತ್ತಲೆ ಗೆಲ್ಲು;
ಆತ್ಮನನಂತಾಕಾಶಕೆ ಏರು,
ತಾಯ್ನೆಲದಲೆ ನಿಲ್ಲು !
ಗೆಲ್ಲು ಮಾನವ, ಗೆಲ್ಲು ಮಾನವ,
ನಿನ್ನನೆ ನೀ ಗೆಲ್ಲು—
ಜೀವನವಾಗಲಿ ನಿತ್ಯ ನವೋನವ
ದೇವಪದದಿ ನಿಲ್ಲು.

೨೦—೧—೧೯೬೮

# ಕೊಟ್ಟು ಬದುಕು

೧

ನೀನಿಲ್ಲದೆ ನೆಲವಿಲ್ಲ,
ನೆಲವಿಲ್ಲದೆ ನೀನಿಲ್ಲ:
ಆದರೇನು? ನಿಂತ ನೆಲ, ನಿನ್ನದಲ್ಲ ನಿನ್ನದಲ್ಲ.
ನಿನ್ನವೆಷ್ಟು ಮೂಟೆಗಾಳಿ, ನಿನ್ನವೆಷ್ಟು ಕುಡಿತೆ ಜಲ?
ಏಕೆ ನೆಲ ನೆಲ ಎಂಬ ದುರ್ಯೋಧನಚ್ಛಲ?
ಈಶಾವಾಸ್ಯಮಿದಂ ಸರ್ವಂ
ಯತ್ ಕಿಂಚ ಜಗತ್ಯಾಂ ಜಗತ್
ತೇನ ತ್ಯಕ್ತೇನ ಭುಂಜೀಥಾಃ
ಮಾಗೃಧಃ ಕಸ್ಯಸ್ವಿದ್ಧನಂ.
ನನ್ನದು ನಿನ್ನದು ಎಲ್ಲರದೀ ನೆಲ ಜಲ ಬಾನು ಬಯಲು
ಎಲ್ಲರದೆಲ್ಲವದೆನ್ನುತ ಕೂಡಿ ಬದುಕೆ ಸುಗ್ಗಿ ಕುಯಿಲು.

೨

ಆಹುದು ವರುಷಕ್ಕೊಮ್ಮೆ ಹೊಲಗದ್ದೆ ಕುಯಿಲು—
ಬೆಳೆವ ಕೈ ಬೇರೆ ತಿನ್ನುವ ಹೊಟ್ಟೆ ಬೇರೆ
ಕೈ-ಹೊಟ್ಟೆಗಳ ಕದನವಾಗೆ ಕೈ ಗೆಲ್ಲುವುದು—
ಗಣಪಹೊಟ್ಟೆಯ ಕಡುಬು ಸುಗ್ಗಿ ಸೂರೆ!

ಕುಳಿತಕಡೆ ಕುಳಿತು ಕಟ್ಟರೆಯುಂಬ ನೆಲದೊಡೆಯ,
ಕಾಣು, ಕಾಲನ ಕೈಯ ಬಗಹದೆಚ್ಚರಿಕೆ:
ಅಳಿವುಳಿವುಗಳ ಆಯ್ಕೆ ನಿನ್ನ ಮುಂಗಡೆಯಿಹುದು,
ಆಗು ಕೊಟ್ಟಳಿದರೂ ಬೆಳೆವ ಗರಿಕೆ.

೩

ದುಂಬಿಗೆಂದೆ ಹೂಗಿಡ ಹೂಬಿಡುವುದು,
ತಿಂಬರಿಗೆಂದೇ ತರು ಫಲ ಕೊಡುವುದು.
ತುಂಬಿದ ಕೆಚ್ಚಲದಾರಿಗೆ ಹಸುವಿನ?
ಉಂಬರಿಗಲ್ಲವೆ ಬೆಳೆ ತಾಯ್‌ನೆಲನ?

೪

ಮಳೆ ಬಂದು ಕೆರೆತುಂಬಿ ಕಟ್ಟೆಯೊಡೆಯದೆ ನಿಲ್ಲೆ
ಹೆಚ್ಚುನೀರಿನ ಹರಿವಿಗಿರಬೇಕು ತೂಬು:
ಗಳಿಕೆಯುಳಿಕೆಗಳಲ್ಲಿ ಕೈಬೊಗಸೆ ತುಂಬಿರಲು
ನೀಡುವುದೆ ನಿನ್ನ ಇಹಪರದ ಕಾಪು.

ಕೊಟ್ಟು ಕೆಟ್ಟವರಿಲ್ಲ; ಕೊಡದೆ ಒಡನೊಯ್ಯಲಿಲ್ಲ;
ಕೊಟ್ಟು ಕಟ್ಟಿಕೊ ನಿನ್ನ ಪಯಣಬುತ್ತಿ.
ಪೆಟ್ಟಿಗೆಯ ಧನವಿಟ್ಟು ಕಟ್ಟಿಗೆಯ ಮೇಲ್ಮಲಗಿ
ಎಂತು ಸಾಧಿಸಬಹುದು ನಿನ್ನ ಮುಕ್ತಿ?

೫

ಕೊಂಡರೇನು ಮಳೆನೀರನು ಕಡಲು?
ಹಿಂದೆಗೆವುದೆ ಮತ್ತದ ಕೊಡಲು?
ಕೊಂಡ ನೀರ ಬಯ್ತಿಡುವುದೆ ಮುಗಿಲು?
ಸುರಿಯದೆ ಮಳೆಯಾಗೆಲ್ಲೆಲ್ಲು?

ಕೊಂಡಮೇಲೆ ಕೊಡಲೇಬೇಕು.
ಕೊಳ್ಕೊಡೆಯೇ ಜೀವನದ ಗತಿ:
ಕೊಂಡುದನ್ನು ಪಡೆದಲ್ಲಿಗೆ ಮುಟ್ಟಿಸು—
ನದೀನಾಂ ಸಾಗರೋ ಗತಿಃ.

ದೇವನೆ ಸರ್ವಸ್ವಕು ಆದಿಮೂಲ,
　　　ದೈವರೂಪ ದೀನಾರ್ತ ಜನ ;
ಕೆರೆಯ ನೀರನ್ನು ಕೆರೆಗೆ ಚೆಲ್ಲುವೊಡೆ
　　　ಅವರಿಗೆ ಮೀಸಲು ನಿನ್ನ ಧನ.

ಎಲ್ಲರಿಗೊಬ್ಬಳೆ ನೆಲತಾಯಿ,
ನನ್ನವಳೆನಲಾದೀತೆ ?
ಸೋದರರಿಗೆಲ್ಲ ಸಮಪಾಲಿರಲಿ,
ಎಲ್ಲರನೂ ಹರಸಲಿ ಮಾತೆ.

೧೪—೧೦—೧೯೫೭]

[ವಿನೋಬ ಭಾವೆಯವರು ಬೆಂಗಳೂರಿಗೆ ಬಂದಿದ್ದ ಸಂದರ್ಭದಲ್ಲಿ, ಅವರ ಸರ್ವೋದಯ ತತ್ತ್ವಕ್ಕನುಗುಣವಾದ ವಿವಿಧ ದಾನಗಳ ಕಲ್ಪನೆಯಿಂದ ಪ್ರೇರಿತವಾಗಿ ರಚಿಸಿದ್ದು.]

# ‘ಕಗ್ಗ’ದ ಮಂಕುತಿಮ್ಮನಿಗೆ

(ಡಿ. ವಿ. ಗುಂಡಪ್ಪನವರು)

ಜೀವನ ವನದ ಮಾವುಬೇವುಗಳ ಸಮನಾಗಿ
ಸೇವಿಸುತ ಪಡೆದಾತ್ಮಶಿಕ್ಷೆಯಲಿ ಗೆಲಿದು
ಭಾವಶುದ್ಧಿಯಿನೊಗೆದ ಸುವಿಚಾರಸೂಕ್ತಿಗಳ
ಓವಿ ನೀ ಜಗಕಿತ್ತೆ—ಮಂಕುತಿಮ್ಮ.

ಕಗ್ಗವೆಂದೆನಬಹುದೆ ನೀನೊರೆದ ವಚನಗಳ?
ಬಗ್ಗಡದ ಬಾಳ ತಿಳಿಯಾಗಿಸುತ ಬಸಿದು
ಸಗ್ಗದಿಂದಿಳಿದ ಗಂಗೆಯು ತೆರದೆ ಹರಿಯಿಸುವ
ಅಗ್ಗಳದ ನುಡಿಯಂತ್ರ—ಮಂಕುತಿಮ್ಮ.

ವೇಮನ್ನ ಸರ್ವಜ್ಞ ಭರ್ತೃಹರಿ ಮಾರ್ಗದಲಿ
ರಾಮಾಯಣಾದಿ ಉದ್‌ಗ್ರಂಥಗಳ ಸಾರ ಬೋ-
ಧಾಮೃತವ ಪಾನಗೈದೆಮಗೆ ಜೇನಾಗಿಸಿಹೆ:
ನೀ ಮಧುಪನೆಂತೊ ಪೇಳ್ ಮಂಕುತಿಮ್ಮ?

ಇಹದ ನೆಲವನು ಮೆಟ್ಟಿ ಪರದ ಬಾನನು ಮುಟ್ಟಿ
ಸಹಕರಿಸುವಂತೆ ಕಣ್ಣೆರಡೊಂದು ನೋಟದಲಿ
ಇಹಪರ ಸಮನ್ವಯದ ದರ್ಶನವ ಸಾಧಿಸಿದ
ಬಹು ಜಾಣನೆಂತೊ ನೀ ಮಂಕುತಿಮ್ಮ?

ಪಡುವಣದ ವಿಜ್ಞಾನ, ಮೂಡಣಾತ್ಮಜ್ಞಾನ-
ವೊಡಗೂಡೆ ವಿಶ್ವಕಲ್ಯಾಣ ಸಾಧಕವು
ಪಿಡಿಯಿರೀ ಮಾರ್ಗವೆಂದೆಡೆಬಿಡದೆ ಬೋಧಿಸುತ
ಪಡೆದೆ ನೀ ಗುರುಪದವ—ಮಂಕುತಿಮ್ಮ.

೧೯೫೭]

# ‘ಶ್ರೀನಿವಾಸ’ನಿಗೆ

(ಮಾಸ್ತಿ ವೆಂಕಟೇಶ ಅಯ್ಯಂಗಾರರು)

ಶ್ರೀನಿವಾಸ! ಕನ್ನಡ ತಾಯ್‌ಮೊಗದ ಮೃದುಹಾಸ!
ನಗೆ ನಿನ್ನ ಬದುಕ ಒಳಹೊರಗುಗಳ ಮರ್ಮ,
ಹಗೆಯಿಲ್ಲದೊಲು ಬಾಳ್ವ ನಿನ್ನ ಜೀವನಧರ್ಮ
ಮಾನವನ ಹೃದಯಮಂದಿರಕೆ ಪ್ರವೇಶ
ತಾನೆನಿಸಿ, ನಿನಗಾಯ್ತು ಮಾನವನ ಗುಣದೋಷ
ಬೋಧ; ಆ ಜಾತಿ ಈ ಜಾತಿ ಹೆಣ್‌ಗಂಡೆಂಬ
ಭೇದವೆಣಿಸದೆ, ನಿನ್ನ ಕಥಾಲೋಕದ ತುಂಬ
ನಾನಾ ಜನಸ್ತೋಮಕಿತ್ತೆ ನೀನಾವಾಸ.
ನಿನ್ನ ಕಥೆಯ ಪ್ರಪಂಚದಲಿ ಕನ್ನಡ ಜನದ
ಹಿಂದಿನಿಂದಿನ ಚೆಲುವು ಬದುಕು ಬಗೆಗೊಳಿಸುತಿದೆ,
ವಿಹರಿಸುತ್ತಿದೆಯಲ್ಲಿ ಓದುವ ಪಯಣಿಗನೆದೆ;
ಹೊನ್ನಹುದು ಹುಡಿವಸ್ತು ನಿನ್ನ ಚೆನ್ನ ಕಥನದ
ಬಂಧದಲಿ; ನೀ ನಿಜದೆ, ಕೃತಕರುಚಿಲವಲೇಶ
ರಹಿತರತ್ನವಿಭೂಷೆ-ಕಥನಶ್ರೀ-ನಿವಾಸ.

೧೯೫೭]

# ಪಂಜರದ ಬಾನಾಡಿ

[ದೇಹವನ್ನು ಒಂದು ಸೆರೆಮನೆ ಎಂದು ತಿಳಿದಿರುವವರೆಗೂ ಆತ್ಮಪಕ್ಷಿ ಅದರಿಂದ ಬಿಡುಗಡೆ ಹೊಂದಬಯಸುತ್ತದೆ. ದೇಹ ಆತ್ಮ ಎರಡೂ ಪರಸ್ಪರಾವಲಂಬಿ, ಅದಿಲ್ಲದೆ ಇದು ಇರಲಾರದು, ಆದ್ದರಿಂದ ಅದರಲ್ಲಿಯೆ ನೆಮ್ಮದಿ ಪಡೆಯಬೇಕು ಎಂಬ ಅರಿವುಂಟಾದಾಗ ದೇಹ ಆತ್ಮಕ್ಕೆ ಹೊರೆಯೆನಿಸುವುದಿಲ್ಲ. ಇದು ಈ ಕವಿತೆಯ ಭಾವದ ತಿರುಳು.]

ಬೇಸರದ ಪಂಜರದ ಕಾರ್ಪಣ್ಯವುಂಬ ಬಿರುಗಾಳಿಗೆಳೆಯ ಬಾನಾಡಿಯಂತೆ
ನೆಲಸಿಹುದು ಮಾನವನ ಮೇಲೇರುವಾತ್ಮ ತನ್ನಯ ಮೂಳೆಮನೆಯಲ್ಲಿ,
ಕೀಳುಮನೆಯಲ್ಲಿ ;
ಆ ಸ್ವತಂತ್ರದ ತನ್ನ ಬಯಲ ನೆನಹಿಂದಾಚೆಗಾಹಕ್ಕಿ ;
ಇದು ಬೆನ್ನು-ಮುರಿ-ದುಡಿತ; ಜೀವಿತಾಯುಷ್ಯದಲಿ ದಿನ-ದುಡಿತ-ಕಳೆತ ;
ಹುಲ್ಲುಹಸಲೆಯ ಮೇಲೊ ಕೂರುಕಂಬಿಯ ಮೇಲೊ ಕಿಳ್‌ನೆಲೆಯ
ಮೇಲೊ-ಮೇಲಿದ್ದರೇನು,
ಎರಡೂ ಹಾಡುವುವು ಕೆಲವೊಮ್ಮೆ ಬಲ್ಸವಿಯ ಬಲ್ಸವಿಯ ಸೋನೆಗಳ,
ಆದರೂ ಎರಡೂ ಮಡಿದಂತೆ ಮುದುಡಿಬೀಳುವುವು ತಂತಮ್ಮ ಗೂಡಿನಲಿ,
ಇಲ್ಲದೊಡೆ ಭಯರೋಷದಲಿ ಸಿಡಿದು ತಿರಿಚಿ ಮುರಿವುವು ತಮ್ಮ
ತಡೆಗಟ್ಟುಗಳ ;
ಸವಿಹಕ್ಕಿಗಾಹಾಡುಹಕ್ಕಿಗೆ ಬೇಕಿಲ್ಲ ವಿಶ್ರಾಂತಿ ಎಂದಲ್ಲ—
ಆಲಿಸಾಲಿಸದೋ, ತೊದಲುಲಿದು ಕೆಡೆದಿತ್ತು ತನ್ನ ಗೂಡಿನಲಿ,
ತನ್ನದೇ ಗೂಡಿನಲಿ, ಕಾಡಗೂಡಿನಲಿ,—ಅಲ್ಲ ಸೆರೆಮನೆ.
ಮಾನವನ ಚೇತಸ್ಸು ತನ್ನುತ್ತಮಿಕೆಯಲ್ಲಿ ದೇಹಬದ್ಧ ;
ಆದರದು ಹೊರೆಯಲ್ಲ: ಹುಲ್ಲುಗಾವಲಿಗೆ ಭಾರದ ಬೇನೆಯೇತರದು
ಮಳೆಬಿಲ್ಲು ಮೆಟ್ಟಿದೊಡೆ, ಅಂತೆಯೇ ಮನುಜನಿಗೆ ಮೂಳೆ ಕಟ್ಟಿದೊಡೆ.

೧—೩—೧೯೫೮]

[Gerard Manley Hopkins ಎಂಬ ಆಂಗ್ಲಕವಿಯ (ಕ್ರಿ. ಶ. 1844-1889) The Caged Skylark ಎಂಬ ಅಷ್ಟಷಟ್ಪದಿಯ ಅನುವಾದ.]

# ದೇವವೈಭವ

[ಪ್ರಕೃತಿಯೆಲ್ಲವೂ ದೇವದೇವನ ಪ್ರತಿಬಿಂಬ. ಮಾನವನಿಗೆ ಇದು ಏಕೆ ಅರ್ಥವಾಗದೆಂದು ಕವಿಗೆ ಅಚ್ಚರಿ. ಹತ್ತೊಂಬತ್ತನೆಯ ಶತಮಾನದ ವಾಣಿಜ್ಯೋದ್ಯಮಗಳಲ್ಲಿ ನಿಮಗ್ನರಾದ ಪಾಶ್ಚಾತ್ಯರು ಹೇಗೆ ಪ್ರಕೃತಿಯನ್ನು ಅವಗಣಿಸಿದರೆಂಬುದನ್ನು ಕವಿ ಸೂಚಿಸಿದ್ದಾನೆ. ಆದರೂ, ಮಾನವನು ನಿಸರ್ಗವನ್ನು ತನ್ನ ಸ್ವಾರ್ಥಕ್ಕಾಗಿ ದುರುಪಯೋಗಪಡಿಸಿಕೊಂಡು ಹಾಳುಮಾಡಿದರೂ ಅದು ಮತ್ತೆ ಮತ್ತೆ ಹೊಸಹೊಸವಾಗುತ್ತಲೇ ಇರುತ್ತದೆ. ಇದು ಪ್ರಕೃತಿಯಲ್ಲಿ ಪರಿವ್ಯಾಪ್ತವಾಗಿರುವ ದೇವನ ವೈಭವದ, ಪ್ರೇಮದ, ಕರುಣೆಯ ಪ್ರತೀಕ; ಪರಿಣಾಮ ಫಲ.]

ದೇವವೈಭವ ಪರಿವ್ಯಾಪ್ತವೀ ಪ್ರಪಂಚಂ:
　　ಭಗ್ಗನುರಿನುಗ್ಗುವುದು, ಝಳಂಪಿಸಿದಸಿಯ ಕಾಂತಿಯೊಲು;
　　ಒಗ್ಗೂಡುವುದು ಮಹಿಮೆಯಾಗಿ, ಮರ್ದಿತ ತೈಲ
ಸ್ರಾವದೊಲು. ಅವನಾಣತಿಯ ಮನುಜರೇಕಲಕ್ಷಿಪರೊ?
ಈವರಂ ತುಳಿದು ತುತ್ತುಳಿದಿಹುದು ಕುಲಕೋಟಿ;
　　ಹೊಲಸುವಾಣಿಜ್ಯದಿಂ, ದುಡಿತದಿಂ ಕಲಸುಮೆಲಸು;
　　ನುಲಿನವ ಪೊದೆದು, ಪಾಲ್ಗೊಂಡಿಹುದು ಸೊಗಡ ಮಾನವನ;
ಈವೊತ್ತು ನೆಲ ಬರಿಯುದರಿಯುದದನಡಿ, ಜೋಡುಮೆಟ್ಟಿ.
ಇಂತಿರ್ದೊಡಂ, ಬೀಯುವಾಗದೆಂದಿಗು ಪ್ರಕೃತಿ;
　　ಹೊಸತನ ಹುದುಗಿರುವುದೆಲ್ಲದರಂತರಾಳದಲಿ;
ಕಂತಿದರು ಕಡೆಯ ಸೊಡರುಗಳೆಲ್ಲ ಕಪ್ಪು ಪಡುವಲಲಿ
　　ಎಸೆದು ಚಿಮ್ಮಿದೆ ಬೆಳಗು ಮೂಡಗಡೆ ಕಂದುಕರೆಯಲ್ಲಿ—
ಮುಂತಿಟ್ಟು ಬೆಚ್ಚನೆಯ ಎದೆಯ ಹೊಳೆವೆರಂಕೆಗಳ
　　ಬಿಸುಪುಕುಳಿತಿಹನಜಾಂಡದ ಮೇಲೆ ಪರಮಾತ್ಮ.

೯—೩—೧೯೫೮]

[Gerard Manley Hopkins (ಕ್ರಿ. ಶ. 1844-1889) ಎಂಬ ಆಂಗ್ಲ ಕವಿಯ God's Grandeur ಎಂಬ ಅಷ್ಟಷಟ್ಪದಿಯ ಅನುವಾದ.]

# ಬಿಡಿ ಹೂ

## ೧. ಕಾವ್ಯಸೃಷ್ಟಿ

ಕಾವ್ಯಸೃಷ್ಟಿ ಯೆನ್ನಲೇನು ?—
ತನ್ನ ತಾನೆ ಕೊಡುವುದು ;
ಅಕ್ಷರ ನಿರ್ವಯಲಿನಲ್ಲಿ
ತನ್ನ ಮುದ್ರೆ ಬಿಡುವುದು.

೧೧—೫—೧೯೪೭]

## ೨. ಬೆಳ್ಳಕ್ಕರೆಯ ಸಾಲು

ಬ್ರಹ್ಮ ಸೃಷ್ಟಿಯ ಕಾರ್ಯದಲಿ ಬಹಳ ಬೇಸತ್ತು
ವಿಶ್ರಮಿಸಿಕೊಳುತ, ಬಳಪವ ಪಿಡಿದು ಕರದೆ
ಬಾನ ಹಲಗೆಯ ಮೇಲೆ ಬಳ್ಳಿಗೆರೆಯೆಳೆವನೆನೆ
ಬೆಳ್ಳಕ್ಕರೆಯ ಸಾಲು ಮೆರೆವುದಾಗಸದೆ.

## ೩. ತಾಳಿಯ ಮೋತೆ

ಕಂಡೆ ಚಿತ್ತಾಪಹಾರಿಣಿ ಚೆಲುವೆಯ,
ಚಣದಲಿ ಚೆಲುವಿಗೆ ಮನಸೋತೆ ;
ತಿಳಿವೆಚ್ಚರಿಸಿತು : ನಡೆನಡೆ ದಾರಿಗ,
ಅವಳಿಟುಕದ ತಾಳಿಯ ಮೋತೆ.

೩—೭—೧೯೪೮]

## ೪. ತುಟಿಗೆ ಕಟ್ಟಿಲ್ಲ

"ಥೂ ನನ್ನ ಮುಟ್ಟಬೇಡಿ."
"ಮುಟ್ಟಿದೆನೆ? ಮುತ್ತಿಟ್ಟೆ ನಿನ್ನ."
"ಸೋಕಿದಂತಾಯ್ತಲ್ಲವೇ?"
"ತುಟಿಗೆ ಕಟ್ಟಿಲ್ಲ, ಚಿನ್ನ."

೨೫—೬—೧೯೫೨]

## ೫. ದುಂಬಿಗೆ

ಬರಿದೆ ಹಾರಾಡುತಿಹೆಯೇಕಿಲ್ಲಿ, ಓ ದುಂಬಿ,
ಸವಿಯ ಹೂಸಂಗವುಂಟೆಂದು ನೆರೆನಂಬಿ?
ಮರಳು, ಮರಳ್, ಓ ಭ್ರಮರ! ಬಯಲೊಳೇಕೀ ಭ್ರಮಣೆ?
ಒಲಿದೊಲಿದು ಕರೆವ ಹೂವಿಲ್ಲ, ಸಖನೆ!

೨೧—೯—೧೯೪೬]

## ೬. ಮಗು-ತಾಯಿ

ಮಗು ನಕ್ಕಿತು ಸೊಡೆಯುಕ್ಕಿತು
ನಲವೇರಿತು ತಾಯ್ಗೆ;
ಮಗುವತ್ತಿತು ಬಗೆ ಬತ್ತಿತು
ಮಗು ಹತ್ತಿತು ಮೈಗೆ.

೯—೯—೫೨]

## ೭. ಮನೆಯ ಆಭರಣ

ಹೊಲಸುಹೇಸುವ ಗಂಡ ಹೆಂಡತಿಗೆ ಹೇಳಿದನು :
' ನೆರೆಮನೆಯ ನೋಡು, ಎಂತೊಪ್ಪ ಓರಣ !
ನೆಲವೊ ಕನ್ನಡಿ ! ಗೋಡೆ ಗೀಚಿಲ್ಲ ! ಕಲಿ ಪಾಠ !'
ಅವಳೆಂದಳ್ : ' ಅವರ ಮನೆಗಿಲ್ಲ ನಮ್ಮಾಭರಣ ! '

೧೨—೫—೧೯೫೭]

## ೮. ಲಕ್ಷ್ಮಿಗೆ ಅಪಮಾನ

ನೀನು ಚಂಚಲೆಯಂತೆ: ಹಳತು ಈ ನುಡಿ, ಲಕುಮಿ :
ಅಪಮಾನವಲ್ತೆ ಈ ಸಟೆಯ ಮಾತು ?
ಸ್ಥಿರಚಿತ್ತದಿಂದ ನೀನೋಲೈಸುತಿಹೆಯಲ್ತೆ
ಬಹುಕಾಲದಿಂದ ಧನಿಕರನೆಯೋತು !

೩೧—೭—೧೯೫೮]

## ೯. ಮೋಲ್ಪಂಕ್ತಿ

ಕೌಪೀನ ಮಡಿಸಿಡುವ ಮಗನ ಕೇಳಿದ ತಂದೆ :
" ಏತಕೀ ಕೌಪೀನ ? "
ಮಗನು ಹೇಳಿದ : " ನೀನು ಅಜ್ಜನಿಗೆ ಕೊಟ್ಟುದನೆ
ಮಾಡುತಿಹೆ ನಿನಗೆ ಜೋಪಾನ."

## ೧೦. ಫಲ ನಿರೀಕ್ಷೆ

ನೆರಳೀವ ಮರವ ಕಡಿದುರುಳಿಸುವೆಯೇತಕ್ಕೆ,
ನೆರಳು ಮಾತ್ರವೆ? ಉಂಟು ಹೂ ಹಕ್ಕಿ-ಹಣ್ಣು.
ಮರವು ಮಃದಿಯಾಗೊಣಗೆ ಈಗ ಬಯಸಿದ ಫಲವ
ಕೊಡುವುದಿಮ್ಮಡಿಯಾಗಿ: ಕಾದು ಉಣ್ಣು.

## ೧೧. ಮುತ್ತು-ರತ್ನ

ಅಂಬುಧಿ ತರಂಗ ರಂಗದಿ ಕುಣಿದು ನಲಿಯುತ್ತ
ಮೆರೆವುದಾವುದು?—ಬುರುಗು ಪಾಚಿ ಸೆತ್ತೆ.
ತುಂಬಿರುವ ಮುತ್ತುರತ್ನಗಳು ಕಡಲಾಳದಲಿ
ಹುದುಗಿ, ದೊರೆವುವು ಮುಳುಗಿದವರಿಗಲ್ತೆ!

೧೯೫೨]

## ೧೨. ನಂದನ ವನ

ನಕ್ಕರೆ ಜೀವನ ನಂದನವನವೈ,
ಅತ್ತರೆ ಅದುವೆ ಶ್ಮಶಾನ.
ನಿಕ್ಕುವವಿಾ ನುಡಿ: ನಗುತಿರು, ಜೀವವೆ,
ಬಿಡು ಬಿಡು ದುಮ್ಮಾನ.

೨೩—೭—೧೯೪೮]

## ೧೩. ಬರಿದೆ ಹುಡುಕಾಟ

ಅಕ್ಕಪಕ್ಕಗಳಲ್ಲಿ ನೇರ ಮುಂಗಡೆಯಲ್ಲಿ
ನಿನ್ನ ನಾ ಹುಡುಕಿ ಕಾಣದೆಹೋದೆ ದೊರೆಯೆ ;
ಸಿಕ್ಕಿಯೂ ಸಿಕ್ಕದಂತೆನ್ನ ಬೆಂಗಡೆಯಲ್ಲಿ
ಬೆಂಗಾವಲಿರುವೆ ನೀನ್ : ಇದನರಿತೆ—ಮರೆಯೆ.

೧೮—೧೨—೧೯೪೬]

## ೧೪. ಕಡೆಯಾಸರೆ

ತಾಯ್ತಂದೆ ಸತಿಸುತರು ಭ್ರಾತ್ರರಾಪ್ತರು ಬಾಳ
ಬಳ್ಳಿಗಾಶ್ರಯವೃಕ್ಷ ಮೊದಲು ನಡುವೆಯಲಿ;
ಆಯ್ತರದಿರದು ಕಾಲ; ಕೊಂಬೆ ತಾಳುಗಳೆಲ್ಲ
ಬೀಳುವುವು : ಆತ್ಮನಾಸರೆ ಕಡೆಯಲಿ.

# ಕೆಲವು ಅಭಿಪ್ರಾಯಗಳು

"ಓದಿ ನೋಡಿದೆ. ಕವನಗಳೆಲ್ಲವೂ ಬಹಳ ಚೆನ್ನಾಗಿವೆ. ಅವಲ್ಲಿಯೂ 'ಮುಟ್ಟಿದರೆ ಮುನಿ', 'ಏಷ ವೃಕ್ಷಃ ಸನಾತನಃ', 'ವನಜ್ಯೋತ್ಸ್ನೆ', 'ಮಿಲನ', 'ನವದಂಪತಿ', 'ಹೊನ್ನಹುಲ್ಲೆ', 'ಮಡದಿಗೊಂದು ಮಾತು' (ಈ ಕವನವನ್ನು ದೊಡ್ಡಕ್ಷರಗಳಲ್ಲಿ ಅಚ್ಚುಹಾಕಿಸಿ ಅದನ್ನು ಕನ್ನಡಿಯಲ್ಲಿ ಚೌಕಟ್ಟಿಸಿ, ಗಂಡಹೆಂಡಿರು ಇದ್ದಿರುವ ಪ್ರತ್ಯೇಕ—, ಕನ್ನಡನಾಡಿನಲ್ಲಿಯ ಮನೆಯಲ್ಲಿ ತೂಗಾಡಿಸತಕ್ಕದ್ದು), 'ಮುಪ್ಪು', 'ಉದಯ ಗಾನ', 'ನಾಳಿನ ಭ್ರಾಂತ', 'ಹೊಸ ವರುಷದ ಒಸಗೆ', 'ಕನಸು ನನಸಾಗ ದೆಂಪೆನಬೇಡ ಗೆಳೆಯಾ!', 'ನಂಬಿಕೆಯೆ ಸತ್ಯ', 'ಕಗ್ಗದ ಮಂಕು ತಿಮ್ಮನಿಗೆ'—ಇವು ಕೆಲವು, ಆಯ್ಕೆಗೆ ಎಡೆ ಇಲ್ಲದಲ್ಲಿ ಆಯ್ದುಕೊಳ್ಳಬಹು ದಾದರೆ, ಮತ್ತೂ ಚೆನ್ನಾಗಿವೆ. . ."

**—ಎಂ. ಗೋವಿಂದ ಪೈ**

* * *

ತಾವು ಅಭಿಮಾನವಿಟ್ಟು ಕಳಿಸಿದ 'ಮುಗಿಯದ ಮಾಯೆ' ತಲುಪಿತು. ನಿಜ, ಈ ಕವಿತಾ ವ್ಯಾಪಾರವೂ ಒಂದು ಮುಗಿಯದ ಮಾಯೆ. ಸಮರ್ಥ ಈ ಮಾಯೆಗೊಳಗಾದರೆ ಆಗ ಅದೊಂದು ಲೀಲೆಯಾಗುತ್ತದೆ; ಅದರಿಂದ ತನಗೂ ಸಂತೋಷ ಜಗಕ್ಕೂ ಸಂತೋಷ. ತನ್ನ ಹೃದಯದಲ್ಲಿರುವ ಸಂತೋಷವನ್ನು ಯಾವ ನಿದಾಘದಲ್ಲೂ ಆರಿಹೋಗದಂತೆ ಕಾಪಿಡುವ ಕಲೆ ನಿಮ್ಮ ಕೈವಶವಾಗಿದೆ. ಅಭಿನಂದನೆಗಳು. ಪುಸ್ತಕ ಬಹು ಅಚ್ಚು ಕಟ್ಟಾಗಿ ಬಂದಿದೆ. 'ಕಲ್ಲಡಿಯ ಹುಲ್ಲುಗರಿಕೆ'ಯನ್ನು ಈಗತಾನೆ ಓದಿ ಸಂತಸಗೊಂಡೆ—ಒಳ್ಳೆ ಚಂದದ ಅನ್ಯೋಕ್ತಿಯದು. 'ನಂದನವನ' ಒಳ್ಳೆ ಮುಕ್ತಕ-ನನ್ನಂಥವನು ಯಾವಾಗಲೂ ನೆನಪಿನಲ್ಲಿಟ್ಟಿರಬೇಕಾದುದು. 'ಎಲ್ಲಿಂದೆಲ್ಲಿಗೆ', 'ನಿದ್ರಾದೇವಿಯ ಹಾಡು', 'ಮುತ್ತು'—What a fine poem! congratulations—'ಕನ್ನೆಗೆ ಬಿನ್ನಹ', 'ಏಷ ವೃಕ್ಷಸ್ಸ ನಾತನಃ' and the first one—'ಪಚ್ಚೆಯ ಲಿಂಗ'—ಸದ್ಯಕ್ಕೆ ಈ

ಪದ್ಯಗಳು ನನ್ನ ಮನವನ್ನು ಕದ್ದಿವೆ. ಮಿಕ್ಕ ಹಲವೂ ಈ ಚೌರ್ಯಕ್ಕಾಗಿ ಕಾದಿರುವಂತಿದೆ. ಅವನ್ನು ನಿಧಾನವಾಗಿ ಓದಿ ಈ ಸಂತೋಷವನ್ನು ಪ್ರಲಂಬಿಸುತ್ತೇನೆ. ನಿಜವಾಗಿ ಹೃತ್ಪೂರ್ವಕ ಅಭಿನಂದನೆಗಳು. ಆಲದ ಮರದಂಥ ಹಲವಾರು ಕವಿತೆಗಳು ನಿಮ್ಮಿಂದ ಮೂಡಲೆಂದು ಆಶಿಸುತ್ತೇನೆ. ಈ ಕವನ ಸಂಗ್ರಹದಿಂದ ನಿಮ್ಮ ಯಶಸ್ಸು ಹೆಚ್ಚುತ್ತದೆ ಎಂಬುದರಲ್ಲಿ ಸಂಶಯವಿಲ್ಲ.

**—ಪು. ತಿ. ನರಸಿಂಹಾಚಾರ್**

* * *

"ಗುರುಪರಂಪರೆ"ಗೆ ಕೃತಜ್ಞತೆಯನ್ನು ಒಪ್ಪಿಕೊಳ್ಳುವ ಈ ಕವನಗಳ ಸಂಕಲನವು ಕನ್ನಡ ಕಾವ್ಯದ ಗುರುಪರಂಪರೆಗೆ ಹೊಂದಿಕೊಂಡು ಹಬ್ಬಿರುವುದು—ಹಳಿಯದರಲ್ಲಿ ಕಾಲೂರಿ ಹೊಸದಕ್ಕೆ ಕೈಚಾಚುವ ಪ್ರಯೋಗಪ್ರಿಯರಿಗೆಲ್ಲ—ಸಂತೋಷಕೊಡುತ್ತದೆ. ಕನ್ನಡ ಸಾಹಿತ್ಯದಲ್ಲಿ, ಅದರಲ್ಲೂ ಆಧುನಿಕ ಸಾಹಿತ್ಯದಲ್ಲಿ, ಕವಿತೆ ಎಂಬುದು ಈ ಸಂಕಲನದೊಳಗಿನ "ಕಲ್ಲಡಿಯ ಹುಲ್ಲುಗರಿಕೆ" ಇದ್ದಂತೆ—ಸಾಹಸದ, ಸತ್ತ್ವದ ಸೃಷ್ಟಿ. ಯಾರು ಏನು ಹೇಳಿದರೂ "ನೂರು ಹೂವು ಅರಳಲಿ" ಎನ್ನುತ್ತದೆ ಸಾಹಿತ್ಯದ ಸನಾತನ ಅಶ್ವತ್ಥವೃಕ್ಷ. "ಚೆಲುವು ತುಂಬಿದೆ ಬಾನುತುಂಬ"; ಜೊತೆಗೆ ನೆಲದ ಸುತ್ತ. 'ಹಸುಷ ಸುಗ್ಗಿಯು ಕಾಳನುಳಿಸುತ. ದುಗುಡ ಜಳ್ಳನು ತೂರುತ' ಈ ಸಂಕಲನದಲ್ಲಿ ಉಸಿರು ಆಡುತ್ತದೆ, ಹಾಡುತ್ತದೆ; ಹೊಸ ನೀರು ಹಳೆಯ ಹೊಳೆಯಲ್ಲಿ ಹರಿಯುತ್ತದೆ. ಈ ಹೊಳೆಯೊಳಗಿನ ಅಲೆಗಳಲ್ಲಿ 'ಅದುವೆ ಚೆನ್ನ ಇದುವೆ ಚೆನ್ನ ಎಂಬ ನಮ್ಮ ಬಹುಮಾನ ನಮ್ಮ ಕಿರಿಯ ನೋಟ ಕಣಾ; ಚೆಲುವಿಗುಂಟೆ ಒಂದು ಮಾನ? ಕೋಟಿ ರುಚಿಯ ಮನುಜಮನಕೆ ಕೋಟಿ ತೆರನು ಚೆಲುವಿನೆಣಿಕೆ." ಇದು ನನ್ನ ಮಾತಲ್ಲ, ಇದರೊಳಗಿನ ಕವನವೊಂದರ ನಾಲ್ಕು ಸಾಲು. 'ನಕ್ಕರೆ ಜೀವನ ನಂದನವನ' ಎಂಬುದನ್ನು ಸಾರುವ ಈ ಕವನಗಳು ಅದೇ ತತ್ತ್ವದಲ್ಲಿ ನಂಬಿಕೆಯಿರುವ ನನಗೆ ಪ್ರಿಯವಾಗಿವೆ.

**—ಜಿ. ಪಿ. ರಾಜರತ್ನಂ**

" . . . ಅವುಗಳಲ್ಲಿ ಅನೇಕಕ್ಕೆ ಸುತ್ತಮುತ್ತಣ ಘನೀಭೂತ ಪದಾರ್ಥಗಳೆ, ವಾಸ್ತವಿಕ ವಿದ್ಯಮಾನಗಳೇ, ನೆಲಗಟ್ಟಾಗಿರುವುದು ಸುವ್ಯಕ್ತ ಹಾಗೂ ಸಂತುಷ್ಟಿಜನಕ. ಆಮೋದದಲ್ಲಿರುವಾಗ ಎಚ್ಚರಿಕೆಕೊಟ್ಟ ಕಾಗೆಯ 'ಅಪಸ್ವರ', ಹಠಾತ್ತಾಗಿ ದರ್ಶನವಿತ್ತ ಧೂಮಕೇತು, ಕಲ್ಲಡಿಯ ಹುಲ್ಲುಗರಿಕೆ, 'ರೋಡ್ ಮಲ್ಲಿಗೆ', ಕವಲು ಜಡೆಯ ಕನ್ನೆ, ಬಸ್ ಸಿಕ್ಕದೆಹೋದ ಕಷ್ಟ, ಕುಂಭ ಮೇಳದ ಅನರ್ಥ–ಹೀಗೆ ವಸ್ತುಗಳ ಚಿತ್ರಣ ಸಲಕ್ಷಣವಾಗಿ ಬಂದಿದೆ. ಎಂದರೆ ಕೇವಲ ಹೃದಯ ಮೋದಸ್ವಪ್ನಗಳ ಪ್ರಪಂಚಕ್ಕೆ ಸೇರಿದ ವಿಷಯಗಳಾವುವೂ ಇಲ್ಲವೆಂದಲ್ಲ. ಅವನ್ನೂ ಸಾಕಷ್ಟು ಜಾಣ್ಮೆಯಿಂದ ಕಣ್ಣಿಗೆ ಕಟ್ಟುವಂತೆ ನಿರೂಪಿಸುವ ಕವಿಶಕ್ತಿ ಲೇಖಕರಲ್ಲಿದೆ. 'ನಾಡಿನ ಭಾಗ್ಯ', 'ರಾಧಾಕೃಷ್ಣ', 'ಕನಸು ನನಸಾಗದೆಂದೆನಬೇಡ', 'ಮುಗಿಯದ ಮಾಯೆ' ಮುಂತಾದುವು ಅದಕ್ಕೆ ಸಾಕ್ಷಿ. ಲೇಖಕರ ಅವಲೋಕನಕ್ಕೆ ಕೊಂಚಮಟ್ಟಿನ ವಿಸ್ತಾರವಿದೆ, ವೈವಿಧ್ಯವಿದೆ. ಭಾವ ಹಾಗಿರಲಿ, ಭಾಷೆಯನ್ನು ಪರಿಕಿಸೋಣ ಎಂದರೂ ಹರವು ಗೋಚರಿಸುತ್ತದೆ. 'ಕಿಲಾಡಿ', 'ಖಯಾಲು', 'ಲಾಂದ್ರ'ದಿಂದ ಹಿಡಿದು 'ಅಭ್ರಾಭಿಸಾರಿಕೆ', 'ಮಂತ್ರಬದ್ಧ ಪ್ರೇತಚ್ಛಾಯೆ', 'ಸ್ಥಾವರ ಋಷಿಪ್ರವರ'ದ ವರೆಗೂ 'ಸ್ವತಂತ್ರ' ನಡೆಯುಂಟು–ಈ ಕವಿಯ ವಾಣಿಗೆ . . . ನಮ್ಮ ನಾಡಿನ ಗಣ್ಯವ್ಯಕ್ತಿಗಳನ್ನು ಪ್ರಶಂಸಿಸುವ ಗೀತಗಳು ಆರೇಳು ಇವೆ. ಅವುಗಳಲ್ಲಿ ಸೌಜನ್ಯ, ಪ್ರಾಮಾಣಿಕತೆ ತುಂಬಿದ್ದರೂ ನನ್ನ ಬುದ್ಧಿಗೇಕೋ ಒಂದು ಗ್ರಾಂಥಿಕ ಮೆರುಗು ಕಾಣಬರುತ್ತದೆ–ಅವುಗಳಿಗೆ ಒಂದು ಕೊರತೆಯಾಗಿ . . . ಕವಿವರ್ಗಕ್ಕೆ ಮೀಸಲಾಗಿರುವ ಚಂದ್ರ, ಹಾರುವ ದುಂಬಿ, ವಸಂತವನ . . . ಮುಂತಾದ ಸಿದ್ಧ ಸಾಮಗ್ರಿ 'ರಾಘವ'ರಿಗೂ ಪ್ರಿಯವಸ್ತುಗಳೆ, ಕವಿತ್ವ ಬಂಡಿಯನ್ನು ಎಳೆಯುವ ಎತ್ತುಗಳೇ! ಅದರಲ್ಲಿಯೂ 'ಚಂದ್ರ'ನಿಗೆ ಇವರು ಬಲು ದುಡಿಮೆ ಕೊಟ್ಟಿದ್ದಾರೆ. ಹೀಗಿದ್ದರೂ ಒಂದು ಬಗೆಯ ನಿಷ್ಠುರ ಯಥಾರ್ಥತೆ ಇವರ ಕವಿತಾ ಧೋರಣೆಯ ಮುಖ್ಯಲಾಂಛನ ಎನ್ನಬಹುದು. 'ತಪ್ಪೊ ಸೆಪ್ಪೊ ನೀನೊಪ್ಪಿಕೊಬೇಕು, ಮನೆಗೆ ನಾನು ಯಜಮಾನ' ಎಂಬ ಖಂಡಿತ ವಚನದಿಂದ ಮೊದಲಾಗುವ 'ಮಡದಿಗೊಂದು ಮಾತು' ಎಂಬ ಗೀತದಲ್ಲಿ ಅಚ್ಚುಕಟ್ಟಾದ ದೃಷ್ಟಿಯಿದೆ, ಉತ್ತಮ

ಸ್ವಾರಸ್ಯವಿದೆ. 'ಮುಂದೆ ಬರಲಿರುವ ಭಾರತ' ಎಂಬ ಗುಂಪುಕೂಗು ನಮ್ಮನ್ನು ಮಬ್ಬಿನ ಮೋಹದಲ್ಲಿ ಮುಳುಗಿಸಿದೆ; ಉತ್ಸಾಹ ಒಳ್ಳೆಯದು, ಆವೇಶವೂ ಕೆಲಸಮಯ ಒಳ್ಳೆಯದು. ಆದರೆ ಆಗಾಗ್ಗೆ ನಿಜಾಂಶವನ್ನು ನಮ್ಮ ತಲೆಗೆ ತಂದುಕೊಂಡರೆ ಕ್ಷೇಮ. ರಾಘವರ 'ನಾಳಿನ ಭಾರತ' ನನ್ನ ಮನಸ್ಸನ್ನು ಹಿಡಿದಿದೆ. ಇಂಥ ಗೀತಗಳನ್ನು ಇನ್ನೂ ಹೆಚ್ಚಾಗಿ ರಾಘವರು ನಿರ್ಮಿಸಲೆಂದು ನನ್ನ ಇಚ್ಛೆ."

—ಪ್ರೊ|| ಎಸ್. ವಿ. ರಂಗಣ್ಣ

* * *

"ಈ ಕವನಸಂಕಲನದಲ್ಲಿ ಪ್ರಕೃತಿ, ಪ್ರಣಯ, ರಾಷ್ಟ್ರೀಯತೆ, ಗುರು ಭಕ್ತಿಗಳನ್ನು ಪ್ರತಿಬಿಂಬಿಸುವ ಕವನಗಳು ತುಂಬಿವೆ . . . 'ಯಾವ ಹೆಸರು ಕರೆದರೂ ಮಧುರವೇ ಗುಲಾಬಿ ಹೂ' ಎನ್ನುವ ರಸಿಕತೆ, . . . 'ಕವಿಗಳ ಚಂದ್ರ'ನನ್ನು 'ಬಡವರ ಲಾಂದ್ರ'ವನ್ನಾಗಿ ಬಣ್ಣಿಸುವ ನೈಪುಣ್ಯ ಚೆನ್ನಾಗಿದೆ. 'ಇಂದ್ರನಂದನವೆ ನಾಳಿನ ಭಾರತ' ಎನ್ನುವ ಕಲ್ಪನೆ ಸುಂದರವಾದುದು. 'ವನಜ್ಯೋತ್ಸ್ನೆ', 'ಮುಗಿಯದ ಮಾಯೆ', 'ಏಷವೃಕ್ಷಸ್ಸನಾತನಃ'–ಈ ಕವನಗಳು ಸಾರವತ್ತಾಗಿವೆ. ನವದಂಪತಿಗಳ ಜೀವನ ವರ್ಣನೆ ಸೊಗಸಾಗಿದೆ. 'ಮಡದಿಗೊಂದು ಮಾತು' ಹೇಳುವ ಹಾಗೂ 'ಮನೆ ಆಗಲಿ ಸ್ವರ್ಗ ಸಮಾನ' ಎನ್ನುವ ಭಾವನೆ ಆಸ್ವಾದ್ಯಶವಾಗಿದೆ . . . ಇವರ ಕವನಗಳಲ್ಲಿ ಹೊಸತನದ ಛಾಯೆ ಕಂಡುಬರುತ್ತದೆ. ಆದರೂ, ವಿಚಾರ ವೀಚಿ ಹಳತನ್ನು ಕೊಚ್ಚಿಹೋಗಿಲ್ಲವೆನ್ನುವುದು ಸಮಾಧಾನವನ್ನೀಯುತ್ತದೆ. ಅಂತೂ ಸಂಕಲನವು ಚೆನ್ನಾಗಿದೆಯೆನ್ನುವುದಕ್ಕೆ ಆಕ್ಷೇಪವಿಲ್ಲ.

—ಕರ್ಮವೀರ

# ಗೀತ ಭಾರತಿ

(ದೇಶ ಭಕ್ತಿ ಗೀತೆಗಳ ಸಂಕಲನ)

ನ್ಯೆ ವೆಂ ಸೀ
ರಾಘವ

ರಾಘವ ಪ್ರಕಾಶನ
ಬೆಂಗಳೂರು – ೧೯

**Gita Bharati** : A collection of Lyrics
and Patriotic Songs

First Edition : 1969


54, 'Aravinda,'
III Cross, Gavipuram Extension,
Bangalore - 19

ಮುದ್ರಣ : ಲಿಪಿ ಮುದ್ರಣ, ಬೆಂಗಳೂರು-೪

ಬೆಲೆ : ರೂ. ೩-೦೦

# ಬಿನ್ನಹ

ಈ ಹಿಂದೆ ಪ್ರಕಟವಾದ ನನ್ನ 'ಹಕ್ಕಿ ಹಾಡು', 'ರಾಷ್ಟ್ರರಥ', 'ಅಶೋಕ ಚಕ್ರ.' 'ರಾಷ್ಟ್ರದಿನೋತ್ಸವ ಗೀತ' – ಎಂಬೀ ಕವನ ಸಂಕಲನಗಳ ಪ್ರತಿಗಳು ದುರ್ಲಭವಾಗಿರುವ ಕಾರಣ, ಈ ಗ್ರಂಥಗಳ ಕವನಗಳನ್ನೆಲ್ಲ ಒಂದು ಸಂಕಲನ ವಾಗಿ ಪ್ರಕಟಿಸಬೇಕೆಂಬ ಆಲೋಚನೆ ಬಂದಿತು. 'ಮುಗಿಯದ ಮಾಯೆ' ಎಂಬ ಕವನ ಸಂಕಲನ ಪ್ರಕಟವಾದಂದಿನಿಂದ (೧೯೫೮) ಇಂದಿನವರೆಗೆ ರಚಿಸಿದ ಹೊಸ ಕವನಗಳ ಸಂಕಲನವೊಂದನ್ನೂ ಹೊರತರುವ ಪ್ರಯತ್ನದಲ್ಲಿದ್ದೆ. 'ಹಕ್ಕಿಹಾಡು' ಒಂದನ್ನು ಬಿಟ್ಟರೆ, ಉಳಿದ ಮೂರೂ ರಾಷ್ಟ್ರಾಭಿಮಾನದ್ಯೋತಕ ರಚನೆಗಳನ್ನು ಉಳ್ಳವು. ಹೊಸ ಕವನಗಳಲ್ಲಿಯೂ ಅಂಥವು ಕೆಲವಿದ್ದವು. ರಾಷ್ಟ್ರಪರ ಗೀತಗಳನ್ನು ಮಾತ್ರ ಒತ್ತಟ್ಟಿಗೆ ಸೇರಿಸಿಕೊಟ್ಟರೆ ಉಚಿತವಾಗಿದ್ದೀತು ಎಂಬ ತೀರ್ಮಾನದಲ್ಲಿ ಬೇರೆ ಬೇರೆ ವಿಚಾರಗಳೂ ನೆಲೆಗೊಂಡವು. ಕಡೆಗೆ ಆ ತಿರ್ಮಾನ 'ಗೀತಭಾರತಿ'ಯಾಗಿ ರೂಪುಗೊಂಡು, ನಾಡುನುಡಿಗಳ ಅಭಿಮಾನಿಗಳು ಆದರದಿಂದ ಬರಮಾಡಿಕೊಳ್ಳು ವರೆಂಬ ನಂಬಿಕೆಯಿಂದ ಅದು ಹೊರ ಬಂದಿದೆ.

ಈ ಸಂಕಲನದ ಎಲ್ಲ ರಚನೆಗಳೂ ದೇಶಭಕ್ತಿ ಗೀತಗಳಲ್ಲ; ಆದರೆ ಎಲ್ಲವೂ ಹೆಚ್ಚಾಗಿಯೋ ಕಡಮೆಯಾಗಿಯೋ–ಗೇಯಗುಣ ಪ್ರಧಾನವಾದವು. 'ಭಾರತೀ' ಎಂದರೆ ಸರಸ್ವತೀದೇವಿ, ಭರತಭೂಮಿ ಸಂಬಂಧವಾದದ್ದು. ವಾಕ್-ಸಂಬಂಧವಾ ದದ್ದು–ಎಂದೆಲ್ಲ ಆಗಬಹುದು. ಈ ವಿವರಣೆಗೆ ಒಳಪಟ್ಟು, ಗೀತಸ್ವರೂಪವುಳ್ಳ ರಚನೆಗಳಲ್ಲಿ ಬಹು ಸಂಖ್ಯೆಯವು ಇಲ್ಲಿ ಎಡೆಪಡೆದು, 'ಗೀತಭಾರತಿ' ಎನಿಸಿವೆ.

ಶಾಸ್ತ್ರೀಯ ಸಂಗೀತ ದೃಷ್ಟಿಯಿಂದ ರಚಿತವಾದ ಕೃತಿಗಳಲ್ಲಿ, ಸಂಗೀತ 'ಧಾತು'ವಿಗೆ ಪ್ರಾಧಾನ್ಯ, 'ಮಾತು' (ಸಾಹಿತ್ಯ) ಗೌಣ. 'ಶುದ್ಧ' ಕವಿತೆಗಳಲ್ಲಿ, ಭಾವ ಅರ್ಥ ಧ್ವನಿ ಪ್ರಧಾನವಾದ 'ಮಾತು' ಪ್ರಮುಖ, ಗೇಯತೆ ಗೌಣ.

ಇಲ್ಲಿನವು ಈಗ ಜನಪ್ರಿಯವಾದ 'ಲಘುಸಂಗೀತ' ಪ್ರಕಾರಕ್ಕೆ ಹೊಂದಿಕೊಳ್ಳು ವಂಥವು, ಎಂದು ಕಂಡುಬಂದಿದೆ. ವಾಸ್ತವವಾಗಿ, ಇಲ್ಲಿನ ಹಲವು ರಚನೆಗಳು 'ಆಕಾಶ ವಾಣಿ'ಯವರ ಕೃಪೆಯಿಂದ ಜನದ ಕಿವಿಗೆ ಬೀಳುವಂತಾಗಿವೆ; ಜನಕ್ಕೆ ಇವು ಎಷ್ಟರ ಮಟ್ಟಿಗೆ ಪ್ರಿಯವಾಗಿವೆ, ಅಥವಾ ಆಗಿಲ್ಲ, ಎಂಬುದನ್ನು ನಾನು ಅರಿಯೆ. ಹಾಡಿ ದವರ ಕಂಠದಾನದಿಂದ ಪ್ರಿಯವಾಗಿದ್ದರೆ ಆಶ್ಚರ್ಯವಿಲ್ಲ! ಹಾಡಿಕೆಯ ಮೂಲಕ ತಾನೆ ಗೀತದ ಸ್ವರೂಪ ಸ್ಫುಟಗೊಳ್ಳಬೇಕು? ಹಾಡಿಕೆಯಲ್ಲಿಯೆ ಗೀತಕ್ಕೆ ದ್ವಿಜನ್ಮ ಪ್ರಾಪ್ತಿ; ಜನ್ಮಸಾರ್ಥಕ್ಯ. ಬರಿಯ ಓದಿಗೆ ತನ್ನ ಸ್ವಾರಸ್ಯವನ್ನು ಬಿಟ್ಟುಕೊಡದು ಇಂಥ ರಚನೆ; ಮನಸ್ಸಿನಲ್ಲಿಯಾದರೂ ಹಾಡಿಕೊಂಡು ಕೃತಿಯ ಆಕೃತಿಯನ್ನು ಅರಿಯಬೇಕು, ಅದರ ಸ್ವಾರಸ್ಯವನ್ನು ಸವಿಯಬೇಕು–ಏನಾದರೂ ಇದ್ದರೆ,

ಈ ಗೀತ ಕುಸುಮಗಳ ಒಡಲಿನಲ್ಲಿ ಕವಿತೆಯ ಗಂಧ ಅಲ್ಲಿ ಇಲ್ಲಿ, ಅನಿತೊ ಇನಿತೊ ಸೂಸಬಹುದು; ಸೂಸಿತೇ, 'ಭಾವಗೀತ' ಎಂದುಕೊಳ್ಳಿ. ಅದು ಇಲ್ಲ, ನಿರ್ಗಂಧಕುಸುಮ ಎನ್ನಬಹುದಲ್ಲ! ಕುಸುಮವಂತೂ ಹೌದು, ಕೇಳುಗರಿಗೆ ಮುಟ್ಟಿಸಬೇಕು ಎಂದುಕೊಂಡ ಒಂದು ಭಾವದ, ಅರ್ಥದ ಆಕೃತಿ, ಅದಕ್ಕೆ ಹೊಂದಿ ಕೊಂಡ ಉಕ್ತಿಯ ಬಂಧ, ಬಣ್ಣ–ಇವು ಇವೆ ಎಂಬ ನಂಬಿಕೆ ಇರುವುದರಿಂದ.

ಈ ಗೀತ ಗುಚ್ಛವನ್ನು ಸಮರ್ಪಣೆ ಮಾಡಲು ಪ್ರೀತಿಯಿಂದ, ಸಂತೋಷ ದಿಂದ, ಸಮ್ಮತಿ ನೀಡಿದ ಪ್ರಾಧ್ಯಾಪಕ ಡಾ॥ ರಂ. ಶ್ರೀ. ಮುಗಳಿ, ಎಂ.ಎ.,ಬಿ.ಟಿ, ಡಿ.ಲಿಟ್., ಅವರಿಗೆ ನಾನು ಚಿರಋಣಿ.

ಪುಸ್ತಕವನ್ನು ಬಹು ಬೇಗನೆ ಅಂದವಾಗಿ ಅಚ್ಚುಮಾಡಿಕೊಟ್ಟ "ಲಿಪಿ ಮುದ್ರಣ"ದ ಕಾರ್ಯಕರ್ತರಿಗೆಲ್ಲ ನನ್ನ ಪ್ರೀತಿಯ ವಂದನೆ.

ಬೆಂಗಳೂರು, ವ್ಯೆ ನೆಂ ಸೀ 'ರಾಘವ'
೩೦–೧೨–೧೯೬೯.

ಉದ್ದಾಮ ಸಾಹಿತಿಗಳಾದ
ಪ್ರಾಧ್ಯಾಪಕ

**ಡಾ॥ ರಂ. ಶ್ರೀ. ಮುಗಳಿ**
ಎಂ.ಎ., ಬಿ.ಟಿ., ಡಿ.ಲಿಟ್.
ಅವರಿಗೆ

ಪ್ರೀತಿ ಗೌರವ ಕೃತಜ್ಞತೆಗಳೊಡನೆ
ಸಮರ್ಪಿಸಿದೆ.

# ಪರಿವಿಡಿ

# ಮೊದಲು ನಿನ್ನ ನಾ ನುತಿಪೆನು ತಾಯೆ

ಓ ಭಾರತಿ ಬ್ರಹ್ಮನ ಮಾರಾಣಿ
ಬಹುಭಾಷಾತ್ಮಕ ವೀಣಾಪಾಣಿ
ಭಾವ ಮಯೂರ ಮನೋಹರ ವಾಹನೆ
ಸಾರಸ್ವತ ಸರಸಿಜ ದಿವ್ಯಾಸನೆ
ಸುಜ್ಞಾನಾಮೃತ ಸುವರ್ಷಕಾರಿಣಿ
ನವರಸಾರ್ದ್ರ ಹೃನ್ಮಾನಸಚಾರಿಣಿ
ಕವಿಜನ ಚಿತ್ತಚಕೋರ ಚಂದ್ರಿಕೆ
ವಿಮಲ ಬ್ರಹ್ಮಾನಂದದಾಯಿಕೆ!
ಮೊದಲು ನಿನ್ನ ನಾ ನುತಿಪೆನು ತಾಯೆ,
ತೊದಲುನುಡಿಯ ಕಂಪನ ನೀ ಕಾಯೆ;
ಹಾಡತೊಡಗಿದೀ ನುಡಿಸಂಗೀತಂ
ಅಕ್ಕೆ ನಿನ್ನ ದಯೆಯಿಂ ವಿಖ್ಯಾತಂ.
ನುಡಿನಾಡೊಲುಮೆಯು ಜನದೊಳು ತುಂಬಿ
ನಿನ್ನಡಿದಾವರೆ ಕಳುಹಿದ ತುಂಬಿ.

೧೯೫೫ : "ರಾಷ್ಟ್ರದಿನೋತ್ಸವ ಗೀತ"

# ಜಲತರಂಗಗಾನ

ಕಲರವದಲೆಅಲೆ ಕಾಲುಹೊಳೆ
ಆಳವೆ ಇಲ್ಲ : ಹಾಯುವಿರಿ –
ಸುಲಭ ಮಕ್ಕಳಿಗು ಮುದುಕರಿಗೂ !
ಏಕೆ ದಡದ ಬಳಿ ಕಾಯುವಿರಿ ?

ನೀರ ಗಾಜಿನಡಿ ಹೊಳೆಕಣ್ ಮಿಟುಕಸು
ಎಸೆದಾಡುತ್ತಿವೆ ಹೊಂಮೀನು ;
ಮೋಡದ ಮಾನಾಟವನೂ ನೀರಲಿ
ಪ್ರತಿಫಲಿಸಿದೆ ನೀಲಿಯ ಬಾನು.

ಎರಡೂ ತೀರದ ತರು ತಲೆತೂಗಲು
ಹರಿಸಿದೆ ಹೊಳೆ ಸಾರಸ ಗಾನ ;
ಏಕೆ ಟೀಕೆ ಜಲತರಂಗಗಾನಕೆ ?
ಕಿವಿಸವಿಯೇ ವ್ಯಾಖ್ಯಾನ.

೭–೧೨–೧೯೬೯

# ವೀಣಾ ವಾಣಿ

ದೇವಿ. ವೀಣಾವಾಣಿ. ನಾದಸ್ವರೂಪಿಣಿ.
ಸ್ವರರಾಜ್ಯ ಸಮ್ರಾಜ್ಞಿ. ಸಂಗೀತಭಾಷಿಣಿ.
ರಾಗ ಲಯ ಭಾವ ಪ್ರಪಂಚಪ್ರಕಾಶಿನಿ.
ನಿತ್ಯನೂತನ ಕರ್ಣಪೀಯೂಷ ವರ್ಷಿಣಿ.
ಸಕಲಜನ ಮಾನಸೋಲ್ಲಾಸಪ್ರದಾಯಿನಿ.
ಶ್ರೋತೃ ಹೃದಯಾರವಿಂದಾಕರ ವಿಕಾಸಿನಿ.
ರಸಿಕಜನ ಹೃದಯವನ ಕೇಳೀವಿನೋದಿನಿ.
ಭಾವುಕಾಂತಃಕರಣ ಶರಧಿಸಂವರ್ಧಿನಿ, –
ಓ ವಿಶ್ವಮೋಹಿನಿ ! ಓ ಮಂಜುಘೋಷಿಣಿ !
ಓ ವಾಣಿಕರಕಮಲ ಭೃಂಗ ಝಂಕೃತಿ ವಾಣಿ !

ಮೊರೆಯುತಿರಲಾವಗಂ ನಿನ್ನ ಝೇಂಕಾರಂ.
ಕರ್ನಾಟಸಂಸ್ಕೃತಿಗೆ ನೀನಲಂಕಾರಂ :
ನಿನ್ನ ನಾದೋಪಾಸನಾಲಭ್ಯಸಂಸ್ಕಾರಂ
ಆತ್ಮಾನುಭವಸಿದ್ಧಿಗದುವೆ ಓಂಕಾರಂ !

೧೯೪೩ : "ಹಕ್ಕಿ ಹಾಡು"

# ಹಾಡು

ಹಾಡುಕಟ್ಟುವವನವನು ನಾಡುಕಟ್ಟುವವನಲಾ ?
ಹಾಡಿನೊಳಗಡಗಿಹುದು ಮಂತ್ರಶಕ್ತಿ!
ನಾಡ ನಾಳಿನ ಬದುಕು ಹಾಡಿನಲಿ ಮೂಡಿ ಬರೆ
ಹಾಡಿನಿಂದಾಗದೇ ನಾಡ ಮುಕ್ತಿ?

ದೇವನನು ಪೂಜಿಸಲು ಹಾಡು ಹೂವಿನ ಹಾರ,
ನಾಡನೆಚ್ಚರಿಸಲ್ಕೆ ಕಹಳೆಕೂಗು ;
ಭಾವುಕರ ರಂಜಿಸಲು ಭಾರತಿಯು ಕೈವೀಣೆ,
ಜನಮನವ ಮಸೆಯೆ ಮೇಲಾದ ಸಾಣೆ.

ಆ ಪುರಂದರ ಕನಕ ಸರ್ವಜ್ಞರೀ ಮೊದಲು
ಹಾಡಿನೊಳಗಿಡರೆ ಕನ್ನಡದ ತಿರುಳ ?
ಆ ಪರಿಯಲಿನ್ನೊಮ್ಮೆ ಮತ್ತೊಮ್ಮೆ ಮಗುದೊಮ್ಮೆ
ಹಾಡಿ ಮಿಡಿಯುವೆವೆ ಕನ್ನಡದ ಕರುಳ ?

ಬಂಕಿಮರ ಹಾಡೊಂದು ಭಾರತೀಯರಿಗಾಯ್ತು
ಬಿಡುಗಡೆಯ ಬವರಕ್ಕೆ ತೂರ್ಯಸ್ವನ ;
ಶಂಕೆಯೇತಕ್ಕಯ್ಯ ? ಹಾಡಯ್ಯ ಹಾಡು ಕವಿ :
ಇಂದಲ್ಲ ನಾಳೆ ಸೆರೆ ನಾಡಿನ ಮನ.

# ತೋರಣ ಕಟ್ಟೋಣ

ಹಬ್ಬ ಬಂತು, ಓ ಹಬ್ಬ! ಕೆಳೆಯರೇ
ತೋರಣ ಕಟ್ಟೋಣ ;
ಹಬ್ಬಹಬ್ಬಕೂ ಮನೆಯ ಬಾಗಿಲಿಗೆ
ತೋರಣ ಕಟ್ಟೋಣ !

ಮಾವಿನ ತೋಪಿಗೆ ಬನ್ನಿರಿ, ಕೆಳೆಯರೆ,
ತೋರಣ ಕಟ್ಟೋಣ ;
ಬೆಳಗಿನ ಜಾವ ಮುಗಿಯುವ ಮುನ್ನ
ತೋರಣ ಕಟ್ಟೋಣ !

ಚುಕ್ಕಿಯಾಗಸದೆ ಮಾಸುವ ಮುನ್ನ
ತೋರಣ ಕಟ್ಟೋಣ ;
ಹಕ್ಕಿ ಗೂಡಿನಲಿ ಎಚ್ಚರುವ ವೇಳೆ
ತೋರಣ ಕಟ್ಟೋಣ !

ಕೆಂಪು ಮೂಡಲಲಿ ಹುಟ್ಟುವ ಹೊತ್ತಿಗೆ
ತೋರಣ ಕಟ್ಟೋಣ ;
ತಂಪು ಹೊತ್ತಿನಲೆ ಸೊಂಪು ತಳಿರಿನ
ತೋರಣ ಕಟ್ಟೋಣ !

ಎಲ್ಲರೊಂದಾಗಿ ಉಲ್ಲಸದಿಂದ
ತೋರಣ ಕಟ್ಟೋಣ ;
ನಲ್ಲನಲ್ಲೆಯರು ಏಳುವ ಮೊದಲೆ
ತೋರಣ ಕಟ್ಟೋಣ !

ಅಕ್ಕ ರಂಗೋಲಿಯಿಕ್ಕುವ ಮೊದಲೆ
ತೋರಣ ಕಟ್ಟೋಣ ;
ಚಿಕ್ಕ ಮಕ್ಕಳೇಳುವ ಹೊತ್ತಿಗೆ ಹೊಸ
ತೋರಣ ಕಟ್ಟೋಣ !

ಸುಂದರಾಂಗಿಯರ ಚೆಂದದ ಹಬ್ಬಕೆ
ತೋರಣ ಕಟ್ಟೋಣ ;
ನಂದಗೋಕುಲವ ಹೋಲುವ ಮನೆಗೆ
ತೋರಣ ಕಟ್ಟೋಣ !

ದೇವದೇವನಾನಂದದ ಹಬ್ಬಕೆ
ತೋರಣ ಕಟ್ಟೋಣ ;
ಪಾವನಮೂರ್ತಿ ಮನೆಗೆ ಬರುವನು
ತೋರಣ ಕಟ್ಟೋಣ !

ಹೊಸತು ಹಬ್ಬವಿದೊ ಕನ್ನಡ ಹಬ್ಬಕೆ
ತೋರಣ ಕಟ್ಟೋಣ ;
ಒಸಗೆಯಾಗಲಿ ನಾಡಿಗೆ ಎನ್ನುತ
ತೋರಣ ಕಟ್ಟೋಣ !

ಸಾಲುಹಬ್ಬದಲಿ ಸಾಲುಸಾಲಾಗಿ
ತೋರಣ ಕಟ್ಟ್ವೋಣ ;
ಸಾಲಸೋಲಗಳು ಇದ್ದರೆ ಇರಲಿ
ತೋರಣ ಕಟ್ಟ್ವೋಣ !

ಪಂಚಭಕ್ಷ್ಯ ಇಲ್ಲಾ ಎನಲೇತಕೆ ?
ತೋರಣ ಕಟ್ಟ್ವೋಣ ;
ವಂಚನೆಯಿಲ್ಲದ ಬದುಕಿನ ಹಬ್ಬಕೆ
ತೋರಣ ಕಟ್ಟ್ವೋಣ !

ಮನೋಮಂದಿರಕೆ ನಿಚ್ಚಹಸುರಿನಾ
ತೋರಣ ಕಟ್ಟ್ವೋಣ ;
ಹೃದಯಕಲಶದಾ ಮುಂಗಡೆ ಹರುಷದ
ತೋರಣ ಕಟ್ಟ್ವೋಣ !

ಬಿಡುಗಡೆ ತಂದಿಹ ಬಿಡುಗಡೆ ಹಬ್ಬಕೆ
ತೋರಣ ಕಟ್ಟ್ವೋಣ ;
ಸರ್ವೋದಯದ ಸ್ವಾಗತಕೆಂದು
ತೋರಣ ಕಟ್ಟ್ವೋಣ !

೨೫–೨–೧೯೪೫ : "ಅಶೋಕಚಕ್ರ"

# ನನ್ನ ಮನೆ

ಈ ಕರುನಾಡಿದು ನನ್ನ ಮನೆ
ನನ್ನ ಮನೆ ಇದು ನನ್ನ ಮನೆ ॥ ಪ ॥

ನೀಲ ಗಗನದಾ ಹಂದರ ಹೊದೆದ
ಬಾಂದಳದಂಚನು ಬಳಸಿರುವ
ಅತ್ತ ಇತ್ತ ಮುನ್ನೀರಂಗಣದ
ಸುತ್ತ ಮುತ್ತ ಕುಡುಮಲೆಸಾಲ್‌ಗೋಡೆಯ —

ಕಡಲ ಕರೆಯ ತಲೆ ತೂಗುವ ತೆಂಗು
ಗಾಳಿವಟ್ಟೆಯಲಿ ಒಲೆಯುವ ಕೌಂಗು
ಕರ್-ಪೊನ್ನಿನ ನೆಲ, ಹಚ್ಚ ಹಸುರು ಹೊಲ :
ಚೆಲುವು ಹೊನಲುಹರಿವೀ ಕರುನಾಡಿದು —

ಹೊಂಗೆಯ ತಳಿರ ತೊಂಗಲ ತೋರಣ
ಸೌರಭ ಸೂಸುವ ಮಂದ ಸಮೀರಣ
ಕಲರವ ಕೂ ಕೂ ಕೋಕಿಲ ಗಾನ
ಸರ್ವಸುಖದ ಬೆಳೆ, ನೆಲೆ, ಈ ನಾಡು.

೧೯೩೭ : "ಹಕ್ಕಿ ಹಾಡು"

# ಕನ್ನಡ ತಾಯಿಗೆ ಮಣಿವ

ಕನ್ನಡ ತಾಯಿಗೆ ಮಣಿವ – ನಾವ್
ಕನ್ನಡಿಗರೆಂದು ಕುಣಿವ ॥ ಪ ॥

ಭಾರತೀಯ ಸ್ವಾತಂತ್ರ್ಯಭಾಗ್ಯದೊಳ-
ಪಾರ ಬಳುವಳಿಯ ಹೊಂದಿ ನಲಿಯುತಿಹ ॥ ಅ. ಪ. ॥

ಗಿರಿಪಂಕ್ತಿತೆವರ ಸುಂದರ ವನವೊ
ತರುರಾಜಿ ತವರ ಚೆಲು ಚಂದನವೊ
ಪರಿಮಳ ಪೊತ್ತಿಹ ಪಡುವ ಪವನವೊ
ನೆರೆ ಕಣ್‌ಮನಗಳಿಗಿವು ಔತನವೊ

ಶಿಲೆಯೆಲ್ಲ ಕಲೆಯೆ ಈ ನಾಡಿನಲಿ
ಕಲೆಯೆಲ್ಲ ಚೆಲುವೆ ಹೊನ್ನಾಡಿನಲಿ
ಚೆಲುವೆ ಒಲವಿನಾ ನಡೆಯಲಿ ನುಡಿಯಲಿ
ಒಲವೆ ಮಂತ್ರವೀ ಧರ್ಮದ ಗುಡಿಯಲಿ

ಕಲೆಯು ಚೆಲುವ ಎದೆಯೊಲವ ನೀಡುತ
ಚಲವನ್ನಳಿದು ಸೋದರರ ಕೂಡುತ
ಬಲವ ಗಳಿಸಿ ತಾಯನು ಕಾಪಾಡುತ
ಗೆಲವು ಮಂಗಳವನಿಳೆಗೆ ಪಾಡುತ

೩೦–೧೧–೧೯೪೭ : "ರಾಷ್ಟ್ರ ರಥ"

# ಬಿಡುವು

ಎಂಥ ಬಾಳಿದು ಬಾಳು, ಚಿಂತೆಯೇ ತುಂಬಿ
ನಿಂತು ನಿಟ್ಟಿಸೆ ವೇಳೆಯಿಲ್ಲದಿರೆ ನಮಗೆ.

ಮರದ ಅಡಿಯಲಿ ನಿಂತು ಕುರಿ ಹಸುಗಳಂತೆ
ಮರೆತು ಮೈಯನು, ನೋಡಲೆಮಗೆ ಹೊತ್ತಿಲ್ಲ.

ಕಾಡಿನೆಡೆ ಸುಳಿದಂದು, ತಾವಾಯ್ದ ತಿನಿಸುಗಳ
ಗೂಡಿಗೊಯ್ಯುವ ಅಳಿಲ ನೋಡೆ ಹೊತ್ತಿಲ್ಲ.

ಇರುಳ ಮೀನುಗಳಂತೆ ಮೀನುಗಳು ತುಂಬಿರುವ
ತೊರೆಗಳನು ತಿಳಿಹಗಲಿನಲಿ ನೋಡೆ ಹೊತ್ತಿಲ್ಲ.

ಚೆಲುವುವೆಣ್ಣಿನ ನೋಟ, ಅವಳ ಅಡಿಗಳ ಮಾಟ,
ಒಲೆವ ಕುಣಿಯುವ ಬೆಡಗು – ಇವ ನೋಡೆ ಹೊತ್ತಿಲ್ಲ ;

ಚಿಗುತು ಕಣ್ಣಲಿ ಅವಳ ನಗೆಯು ಕುಡಿ ಬಾಯಲ್ಲಿ
ಮುಗುಳೊಡೆವವರೆಗೆ ಕಾದಿರಲು ಹೊತ್ತಿಲ್ಲ.

ಇಂಥ ಬಾಳ್ ಬಡಬಾಳು : ಚಿಂತೆಯೇ ತುಂಬಿ
ನಿಂತು ನಿಟ್ಟಿಸೆ ವೇಳೆಯಿಲ್ಲದಿರೆ ನಮಗೆ.

೧೯೪೭ : "ಅಶೋಕಚಕ್ರ"

ಭಾವಾನುವಾದ : William H. Davies ಅವರ
'Liesure' ಎಂಬ ಆಂಗ್ಲಕವನ.

# ಕಿರು ತಾರೆ

ಓ ಕಿರು ತಾರೆಯೆ ! ಬಾನೊಳಗೆ
ಬೆಳಗುವಂತೆ ಬೆಳಗೆನ್ನೊಳಗೆ !

ಬಗೆಯನು ಬಾನಿಗೆ
　ಬಿಗಿಯುವ ಕೊಂಡಿ ;
ಬಾನಿಂದಾಚೆಯ
　ಬೆಳಕಿನ ಕಂಡಿ.

ಬಾನಿನಾಳದಾ
　ಅರ್ಥಸ್ಫೂರ್ತಿ ;
ಜ್ಯೋತಿರ್ಮಯನಾ
　ಮಂಗಳ ಕೀರ್ತಿ.

ಬುದ್ಧಿಗೆ ನಿಲುಕದ
　ಭಾವ ವ್ಯಾಪ್ತಿ,
ವಿಶ್ವಾತ್ಮನ ಪರಿ-
　ಚಾಯಕ ದೀಪ್ತಿ.

೨೯-೪-೧೯೪೦ : "ಹಕ್ಕಿ ಹಾಡು"

# ಸಂಧ್ಯಾಸಮಯ ಸಮೀರಣ

ಸಂಧ್ಯಾಸಮಯ ಸಮೀರಣ
ಗಂಧಾನ್ವಿತ ಮೃದುಚರಣ
ಹುಡುಕುವೆ ಯಾರನ್ ?

ಅಲ್ಲಲ್ಲಿಯೆ ನಿಲ್ಲುತ, ಬಲು
ಮೆಲ್ಲನೆ ನಡೆಯುತ, ಸುತ್ತಲು
ಹುಡುಕುವೆ ಯಾರನ್ ?

ಸುಂದರ ಸುಮಗಳ ಚುಂಬಿಪೆ,
ಲತೆಗಳ ಕಚಗುಳಿಯಿಡುವೆ –
ಏನಿದು ಆಟಂ !

ನಲ್ಲಳ ನೀನ್ ಮರೆತೆಯೊ ಏನ್ ?
ಎಲ್ಲರ ಬಳಿ ಸುಳಿಯುವೆ ನೀನ್ –
ಏನಿದು ಬೇಟಂ !

೧೯೩೬ : "ಹಕ್ಕಿ ಹಾಡು"

# ಕಾಮನ ಬಿಲ್ಲು

ಮುಸುಕಿದ ಮಬ್ಬದು ಜಾರುತಿದೆ,
ಹೊಸ ಕಳೆ ಇಳೆಯಲಿ ತೋರುತಿದೆ !
ಕಾಮನ ಬಿಲ್ಲದೊ ಮೂಡುತಿದೆ,
ಸೊಗದಂಬನು ತಾ ಹೂಡುತಿದೆ !

ಬಗೆ ಬಗೆ ಸುಮಗಳ ಬಣ್ಣವ ಸಮನಿಸಿ
ಬಾನ್‌ಬಟ್ಟೆಯಲದ ಬರೆದಂತೆ
ಬಗೆಗೊಪ್ಪುವ ಮಳೆಬಿಲ್ಲನು ನೋಡು –
ಬ್ರಹ್ಮನ ಸೃಷ್ಟಿವಿಲಾಸದ ಹಾಡು !

ಜಗದಾನಂದವನಳೆಯುವ ತೆರದಲಿ
ಬಾಂದಳವನ್ನದು ಅಪ್ಪುತಿದೆ ;
ಸೊಗಸಿನ ಕಣಿ ನಾನೆನ್ನುವ ಪರಿಯಲಿ
ಹೃದಯ ಮನಂಗಳಿಗೊಪ್ಪುತಿದೆ !

ಬಾಗಿದ ಬಣ್ಣದ ಬಿಲ್ಲಿನ ಕೊನೆಗಳ-
ನೆನ್ನಯ ಹೃದಯವು ಬಿಗಿಯುತಿರೆ,
ಮೇಗಡೆ ಹಾರುತ ಒಡನೆಯೆ ಬಿಲ್ಲನು
ಪಿಡಿಯುವ ತೆರದಲಿ ನೆಗೆಯುತಿರೆ !

ಒಂದೇ ಕ್ಷಣದಲಿ ಚೆಲುವನು ಬೀರಿ
ಸೃಷ್ಟಿರಹಸ್ಯವ ಕಣ್ಣಿಗೆ ತೋರಿ
ಕಾಮನ ಬಿಲ್ಲದು ಕಣ್‌ಮರೆಯಾಯ್ತು,
ಬಾನ ಬಟ್ಟೆ ತಾ ಬರಿದಾಯ್ತು!

೨೭–೧೨–೧೯೩೧ : "ಹಕ್ಕಿ ಹಾಡು"

# ಸುಧೆ ಸುರಿಯುವ ತಿಂಗಳ ಕಳೆ

ಸುಧೆ ಸುರಿಯುವ ತಿಂಗಳ ಕಳೆ
　　ನೀಲಿಯ ತಿಳಿ ಬಾನು ;
ಕೆಳಗಿದೊ ನೆರೆ ಮಲಗಿಹ ಇಳೆ –
　　ಒಬ್ಬನೆ, ಸುಖಿ ನಾನು !

ತೀಡುತಲಿದೆ ತಂಗಾಳಿ,
　　ಮೌನವು ಹಬ್ಬುತಿದೆ ;
ಹಾಡುತ ಬಲು ಮುದ ತಾಳಿ
　　ಎನ್ನೆದೆಯುಬ್ಬುತಿದೆ !

ಎನಗಮೃತವು ತಿಳಿ ಜೊನ್ನ,
　　ನಾನದ ಕುಡಿಯುವೆನು :
ಅಮರತ್ವವನಿದೊ ಮುನ್ನ
　　ನಾನಿಲ್ಲಿಯೆ ಪಡೆಯುವೆನು !

೨೨–೧–೧೯೩೨ : "ಹಕ್ಕಿ ಹಾಡು"

# ಆ ತಾರಾವಳಿ ಈ ದೀಪಾವಳಿ

ಶರತ್‌ಕಾಲದಲಿ ನಭದ ನಿಲಯದಲಿ
ಮಣಿದೀಪದ ಗಡಣ
ಅಶ್ರುತಗಾನದ ಸ್ವರ ಸೋಪಾನದ
ಕಾಣುವ ಬೆಳಕಿನ ತನನ.

ಸುರ ಗಾಯಕಿ ತಾನಲ್ಲಿ ನಾಯಕಿ
ಗಂಧರ್ವ ಗಾನ ವೃಂದಕ್ಕೆ;
ಸುಸ್ವರಸೇಚನ ಮೈರೋಮಾಂಚನ
ಬಾನ್‌ನೀರೆಗೆ ಆನಂದಕ್ಕೆ.

ಬತ್ತಲೆ ನೂತುದೊ ಕತ್ತಲೆ ಹೂತುದೊ
ಅವಳ ಸೀರೆ ಜರತಾರಿ ;
ಕತ್ತರಿಸಿ ಬಿತ್ತು ಜರಿಯ ಸಂಪತ್ತು
ಎನೆ ಭೂಮಿ ದೀಪಧಾರಿ.

ಬೆಳಕಿತ್ತ ದಿವಕೆ ಬೆಳಕಿನ ಕಾಣಿಕೆ
ಸಲ್ಲಿಸಿ ನೆಲವಿದು ಧನ್ಯ;
ಆ ತಾರಾವಳಿ ಈ ದೀಪಾವಳಿ –
ಎರಡರ ಬೆಸುಗೆಯನನ್ಯ.

೧೯೬೪

# ದೂರದ ಧ್ರುವ ನಕ್ಷತ್ರ

ದೂರದ ಧ್ರುವ ನಕ್ಷತ್ರವು ಸಣ್ಣ;
ತೋರದೆ ಗುರಿಯನ್ನೆಲ್ಲರಿಗೆ ?
ಮೂಲೆಯ ಮಲ್ಲಿಗೆ ಕಾಣದು, ಕಿರಿದು ;
ಬೀರದೆ ಕಂಪನ್ನೆಲ್ಲೆಡೆಗೆ ?

ಒಲುಮೆಯ ಮಾತದು ಒಂದೇ ಆದರು
ತೆರೆಯದೆ ಹೃದಯ ಕವಾಟವನು ?
ಕಂಬನಿಯೊಂದೇ ತೋರದೆ ಕಣ್ಣಿನ
ಕರೆಯೊಳಗೊಂಡಿಹ ಕಡಲನ್ನು ?

ಕೀಲುಗಲ್ಲು ತಾನೊಂದೆ ಕಮಾನಿಗೆ
ಮೇಲು ಭಾರವೆಲ್ಲವ ಹೊರದೆ ?

ಪಾಲಕ ಚಾಲಕ ಶಕ್ತಿಯದೊಂದೇ
ವಿಶ್ವವ್ಯಾಪಕವಾಗಿರದೆ ?

೮–೫–೧೯೫೫

# ಸುಪುತ್ರಸಂಸ್ಮರಣೆ

ಮೇಲೆ ಹಿಮಗಿರಿಮಾಲೆ, ಸುತ್ತ ಕಡಲಿನ ವೇಲೆ,
ಪರ್ವತಾರಣ್ಯಗಳ ಸಾಲುಸಾಲೆ ;
ಹಾಲು ಜೇನನು ಹರಿಸಿ, ತನ್ನ ಮಕ್ಕಳ ಹರಸಿ,
ಹಿಗ್ಗುತಿದ್ದಳು ಭರತಮಾತೆ ಲೋಕದಲೆ.

ಮಾತೆಗಾಗಿಯೆ ದುಡಿದ ಮಾತೆಗಾಗಿಯೆ ಮಡಿದ
ಸುತರ ಸುಪವಿತ್ರ ಸಂಸ್ಮರಣೆಯಿಂದು
ಸೇತುವೆಯು ಸಂಪುಷ್ಟಿಗೊಳಿಸಲೆಮ್ಮೆಯ ಬಾಳ
ಅವರ ಲೋಕದ ನಿಧಿಯ ನಾವು ತಂದು.

ಹಿಮಪರ್ವತೋತ್ತುಂಗ ದಿವ್ಯದರ್ಶನ ಪಡೆದ
ಋಷಿವರೇಣ್ಯರ ಹಡೆದಳೆಮ್ಮ ಮಾತೆ ;
ವಿಮಲಗಂಗಾಸ್ರೋತ ಸುಜ್ಞಾನ ವಾಹಿನಿಯ
ಮಿಂದು ಮಡಿಯುಟ್ಟವಳು ನಿತ್ಯಪೂತೆ.

ರಾಮಾಯಣವ ರಚಿಸಿ ಭಾರತದ ಕಥೆಯೊರೆದು
ವಾಲ್ಮೀಕಿ ವ್ಯಾಸ ಕವಿಋಷಿವರ್ಯರು
ಶ್ರೀಮಂತ ಕಾವ್ಯರಚನಾ ರುಚಿರ ಮಾರ್ಗಕ್ಕೆ
ಶ್ರೀಕಾರವಿಟ್ಟಮರ ಕಾವ್ಯಕಲ್ಪತರು.

ಭಾರತದ ಕಣ್ಣೆರಡು ಈ ಮಹಾಕಾವ್ಯಗಳು
ಜೀವನೋತ್ಕರ್ಷ ಸಾಧನ ಮಾರ್ಗಸೂಚಿ
ಸಾರಭೂತಂಗಳಿವು ಭಾರತದ ಸಂಸ್ಕೃತಿಯು,
ಸಂಸಾರಸಾಗರೋತ್ತರಣ ದಿಕ್ಸೂಚಿ.

ಭಾಸ ಶೂದ್ರಕ ಕಾಳಿದಾಸ ಭವಭೂತಿಗಳ್
ಪಂಪ ರನ್ನ ಕುಮಾರವ್ಯಾಸ ಲಕ್ಷ್ಮೀಶ
ದಾಸಕೂಟದ ಬಳಗ ಶಿವಶರಣ ಸಂದೋಹ
ಈ ಕವಿಗಳಿಂದಲ್ತೆ ಪೂಜ್ಯ ದೇಶ.

ಸರ್ವೇಶ್ವರನು ಸರ್ವಭೂತಸ್ಥನಾಗಿರಲು
ಸರ್ವರೂ ಸಮವೆಂಬ ದಿವ್ಯಭಾವ,
ಸರ್ವ ಜಾಗವೆ ಸರ್ವಭೋಗಕಡಿಗಲ್ಲೆಂಬ
ಸರ್ವಸಮತಾತತ್ತ್ವಕೆನಿಸೆ ಜೀವ

ಸರ್ವ ಜನರೂ ಸುಖಿಗಳಾಗಿ ಬಾಳಲಿಯೆಂಬ
ಹಾರೈಕೆ ಹೊಮ್ಮಿತೀ ನಾಡಿನಲ್ಲಿ;
ಉರ್ವರೆಗೆ ಮಂಗಳವ ಕೋರುವಾ ಪಲ್ಲವಿಯೆ
ಭರತಮಾತೆಯು ಪೇಳ್ದ ಹಾಡಿನಲ್ಲಿ.

ಉತ್ತರಾಪಥದಿಂದ ದಕ್ಷಿಣಕ್ಕೈತಂದು
ರಾಮನೊಂದಾಗಿಸಿದ ನಮ್ಮ ನಾಡು
ಮತ್ತೆಮತ್ತೊಡೆದರೂ ಕೂಡಿಕೊಳುವುದು ಮರಳಿ
ಅವನ ಕೃಪೆಯಿಂದಿಲ್ಲವಳಿವ ಕೇಡು.

ಕುರಿಯು ನರನಂಗೈದು ನರನ ನಾರಾಯಣನ
ಗೈವ ಸಂದೇಶಸುಧೆಗರೆವ ಗೀತೆ
ಸ್ಫುರಿಸಿ ಕೃಷ್ಣನ ಕೊಳಲ ಗಾನ ಮೋಹನವಾಗೆ
ಹೇಳಿ ಕಲಿಸಿದಳದನು ನಮಗೆ ಮಾತೆ.

ಕ್ಲೀಬತನವನು ಕಳೆದು ನರರ ಹುರಿದುಂಬಿಸಲು
ಎಂದೆಂದಿಗೂ ಗೀತೆ ಪಾಂಚಜನ್ಯ;
ಹಿಂಸೆಗತ್ತಲೆ ಕವಿದ ಜಗದಿ ಶಾಂತಿಯು ಬೆಳಕ-
ನರಸುವವರಿಗೆ ಗೀತೆಯೇ ಶರಣ್ಯ.

ಕ್ಷಾತ್ರವನು ಸದೆಯೆ ಭೃಗುರಾಮ ಕೊಡಲಿಯ ಪಿಡಿದ,
ರಕ್ಕಸರಿಗಾಗಿ ರಘುರಾಮ ಶರಧಾರಿ ;
ದುಷ್ಕೃತರ ನಾಶಕ್ಕೆ ಧರ್ಮಸಂಸ್ಥಾಪನೆಗೆ
ಚಕ್ರವೆತ್ತಿದನೆನಿತೊ ಸಲ ಮುರಾರಿ.

ಹಿಂಸೆಯಿಂ ಪ್ರತಿಹಿಂಸೆ, ಮತ್ತದೇ ಹಳದಾರಿ –
ಕೊನೆಗೊಳ್ಳದೆಂದಿಗೂ ವಿಷವಚಕ್ರ;
ಸಂಸಾರದೀ ಹಿಂಸೆ ದುಃಖಗಳ ಕೊನೆಗೊಳಿಸೆ
ಬುದ್ಧ ಪ್ರವರ್ತಿಸಿದ ಧರ್ಮಚಕ್ರ.

ಕಾಳಗದ ಕಗ್ಗೊಲೆಗೆ ಹೇಸುತಲಶೋಕ ದೊರೆ
ಧರ್ಮಚಕ್ರವ ಪಿಡಿಯುತುರುಳ ಬಿಡಲು
ದಾಳಿಯಿಟ್ಟುದು ಧರ್ಮ ದೇಶದೇಶಗಳಲ್ಲಿ
ತಂಪಾಯ್ತು ಕಡೆಗೊಮ್ಮೆ ಪೃಥ್ವಿಯೊಡಲು.

ಹಲವು ಮತಧರ್ಮಗಳ ಬೀಡೆನಿಸಿ ಭಾರತವು
ಹೊಲಬುಗೆಡೆ ಜನರು ಧರ್ಮಾರಣ್ಯದೆ
ಹಲವು ನದಿ ಕಡೆಗೊಂದೆ ಕಡಲ ಕಡೆಗೆಂಬುದನು
ತೋರಿದಾತನು ಪರಮಹಂಸ ಗುರುವೆ.

ಪರಮಹಂಸರ ದಿವ್ಯ ಸಂದೇಶಸುಧೆಯನು
ವಿಶ್ವಕೆರೆದವನು ವಿವೇಕಾನಂದನು ;
ದರಿದ್ರನಾರಾಯಣನ ಸೇವೆ ದೇಶದ ಸೇವೆ-
ಯೆನುತ ದೇಶಪ್ರೇಮ ಗುರುವಾದನು.

ಕಾಲಕಾಲಕೆ ಇಂತು ಧರ್ಮ ಮುಖ ತಿರುಗುತ್ತ
ಬೇರೆಬೇರೆಯ ತೆರನೆ ಕಾಣುತಿರಲು
ಕಾಲಧರ್ಮದ ಬಸಿರ ಶಿಶುವಾಗಿ ಜನಿಸುತ್ತ
ಗಾಂಧಿ ತೋರಿದ ಧರ್ಮ ಹಳತೆ ಹೊಸತು.

ಗಾಂಧಿ ನೂತನ ಯುಗದ ಧರ್ಮಾವತಾರನ್ಮೈ,
ಭರತಮಾತೆಯ ಸೆರೆಯ ಬಿಡಿಸಿದಾತ ;
ಧರ್ಮಪೀಠದ ಮೇಲೆ ಸ್ವಾತಂತ್ರ್ಯ ಸೌಧವನು
ಕಟ್ಟಿ ಧರ್ಮಕೆ ಕೊರಳನಿತ್ತ ಪೂತ.

೧೯೫೪ : "ರಾಷ್ಟ್ರದಿನೋತ್ಸವ ಗೀತ"

# ರಾಷ್ಟ್ರಘಟನಾ ದಿನ

ಈ ದಿನಂ ನವ್ಯಭಾರತ ರೂಪುಗೊಂಡ ಸುದಿನಂ ;
ಸ್ವಾತಂತ್ರ್ಯ ನಿರ್ಘೋಷ ಮೊದಲು ಮೊಳಗಿದ ದಿನಂ ;
ರಾಷ್ಟ್ರರಥಮಂ ಕಟ್ಟಿ ಮೊದಲೆಳೆದ ಶುಭದಿನಂ ;
ಭಾರತಾಂಬೆಯ ಭಕ್ತಿಯಿಂ ನೆನೆವ ಪರ್ವದಿನಂ ;
ಜನತಾ ಜನಾರ್ದನನ ಪೂಜಿಪ ಪವಿತ್ರ ದಿನಂ ;
ಐಕ್ಯದೊಳ್ ನವಶಕ್ತಿ ಮೂಡಿದ ಮಹಾದಿನಂ !
ದೌಷ್ಟ್ಯಬಾಧಿತ ಧರ್ಮಚಕ್ರ ಪ್ರವರ್ತನಂ
ಮತ್ತುರುಳತೊಡಗಿದ ಚರಿತ್ರಾರ್ಹ ಶಿವದಿನಂ ;
ನೂತನ ಪುರಾತನ ಸಮನ್ವಿತ ಸನಾತನಂ
ಹಳತರಿಂ ಹೊಸತಕ್ಕೆ ಕರೆವ ಸಂಕ್ರಾಂತಿ ದಿನಂ ;
ತಾಯ್ಗೆ ಮಕ್ಕಳು ಮೀಸಲಿಟ್ಟು ತನುಮನಧನಂ
ನಿತ್ಯಸೇವಾದೀಕ್ಷೆ ಕೊಳುವ ಪುಣ್ಯೆಯ ದಿನಂ ;
ಶ್ರೀ ಗಾಂಧಿ ಕಂಡ ಹೊಂಗನಸ ನನಸಿನ ದಿನಂ :
ಲೋಕಕಲ್ಯಾಣ ಸಾಧನ ಪೀಠಿಕಾದಿನಂ :
ಆಚಂದ್ರತಾರಂಬರಂ ಭಾರತದ ಜನಂ
ನೆರೆದಿಂತೆ ನೆನೆಯುತಿರ್ಕೀ ರಾಷ್ಟ್ರಘಟನಾ ದಿನಂ !

೧೯೫೪ : "ರಾಷ್ಟ್ರದಿನೋತ್ಸವ ಗೀತ"

# ರಾಷ್ಟ್ರರಥೋತ್ಸವ

ಇಂದು ರಾಷ್ಟ್ರರಥೋತ್ಸವ
ಬನ್ನಿ ರಥವನೆಳೆಯುವ :

ಹಿಂದು ಸಿಕ್ಕ ಮುಸ್ಲಿಮರು
ಒಂದುಗೂಡುತೆಲ್ಲರೂ
ಸಾಲುಗೊಳ್ಳುತೊಕ್ಕಟ್ಟಿನ
ಹಗ್ಗ ಹಿಡಿದು ಹೊಸ ಹುಟ್ಟಿನ

ಭಾರತ ರಥವೆಳೆಯುವ.
ದೂರದೂರಕೆಳೆಯುವ,

ಏನು ನಮ್ಮ ರಥದ ಚೆಲುವು,
ಏನು ನಮ್ಮ ರಥದ ಗೆಲುವು !
ವೇದ ಉಪನಿಷತ್ತು ಕಾವ್ಯ
ಸಕಲ ಕಲಾ ಸಾರಸತ್ತ್ವ
ಸಮೆದ ದಿವ್ಯ ರಥವಿದು,
ಪುರಾಣಪೂತ ರಥವಿದು.
ರಾಷ್ಟ್ರಶಿಲ್ಪಚತುರರ ಮನ
ರಥಕೆರೆದಿದೆ ಹೊಸಹೊಸತನ.
ಕಂಗೊಳಿಸಿದೆ ದಿವ್ಯರಥ,
ನೂತ್ನ ಭಾವರತ್ನಖಚಿತ,
ಸ್ವತಂತ್ರತಾ ಸುಶಕ್ತಿ ರಚಿತ ;

ಇದಕಹಿಂಸೆ ಸತ್ಯ ಗಾಲಿ,
ಧರ್ಮಪಥದೆ ಸಾಗಲಿ.
ಅತ್ತ ಇತ್ತ ಹೊರಳದ ಪರಿ
ಹಾಕುವ ಸಂಯಮದ ಬಿರಿ.
ಇಂತು ರಥವು ನಡೆಯಲು
ಯಾರಿಗೆ ಎದೆ ತಡೆಯಲು ?
ನಿಲದೆ ನಡೆಯಲೀ ರಥ
ನವ್ಯ ಭಾರತ.

ಭರತಮಾತೆ ಅಭಿಜಾತೆ
ನವೋಲ್ಲಾಸ ಸುಸ್ಮಿತೆ
ನೂತ್ನ ರಚಿತ ರಥಮಂಡಿತೆ
ಸಕಲ ಸಂಘಪೂಜಿತೆ.
ಭಾರತ ಹೃತ್ಕಮಲಾಸನೆ
ಸಸ್ಯಹರಿದ್ವರ್ಣವಸನೆ
ಹಿಮತುಷಾರ ಮಕುಟ ಭೂಷೆ
ವಿವಿಧ ವಿನುತ ಮಧುರ ಭಾಷೆ
ಶಾಂತಿ ಭರಿತೆ ಅಭಯದಾತೆ
ವರದಹಸ್ತಶೋಭಿತೆ,

ಜಯ ಜಯ ಭಾರತ ಮಾತೆ
ಜಯ ಜಯ ಭಾರತ ಮಾತೆ
ಜಯ ಭಾರತ ಮಾತೆ !

೧೯೫೦ : "ರಾಷ್ಟ್ರರಥ"

# ಹೆತ್ತ್ತಕರುಳು ಒಂದೇ

ಇರಲಿ ಇರಲಿ ನೂರು ಭೇದ
ಬೇಡ ನೂರು ಎಂಬ ವಾದ
ನೂರು ರತ್ನ, ದಿಟ – ಕೋದ
        ಹಾರವೊಂದೇ – ತಾಯ
        ಹಾರವೊಂದೇ.

ನೂಲಿನ ಎಳೆ ಸಾವಿರಾರು
ಹಾಸುಹೊಕ್ಕುಹರಿದು ಸೇರು-
ತೊಂದು ವಸ್ತ್ರವಾಗೆ – ಉಡಲು
        ಸೀರೆಯೊಂದೇ – ತಾಯ
        ಸೀರೆಯೊಂದೇ.

ಸಪ್ತಸ್ವರ ಬೇರೆ ಬೇರೆ
ಹೊಂದುತೊಂದು ಶ್ರುತಿಯ ಸೇರೆ
ತಾಯ ಹೊಗಳೆ ಹೊಮ್ಮಿ ಉಲಿವ
        ಗೀತವೊಂದೇ – ನಾಡ
        ಗೀತವೊಂದೇ.

ಕೋಟಿ ಕೋಟಿ ಮಕ್ಕಳಿರಲು
ನೂರು ನುಡಿ ಕೋಟಿ ಕೊರಲು :
ಸೋದರಿಕೆಯ ಬಾಂಧವ್ಯದ
ಕರುಳದೊಂದೇ – ಹೆತ್ತ
ಕರುಳದೊಂದೇ.

೧೭–೭–೧೯೬೫

# ನಾಡ ತಾಯಿಗೆ ನಮಿಪೆವು

ತಾರೆಗಳ ಹೂ ಮುಡಿದ ಮುಡಿಯ
ಸೀರೆಯಂಚಿನ ಕಡಲ ತಡಿಯ
ಕಡಲು ತೊಳೆಯುವ ಮಡಿಯ ಅಡಿಯ
ನಾಡ ತಾಯಿಗೆ ನಮಿಪೆವು,

ಸತ್ಯಸೂರ್ಯನ ನಿತ್ಯದಾರತಿ
ಎತ್ತಿಹಿಡಿದಿಹಳಿದೆಕೊ ಭಾರತಿ
ಹೊತ್ತಿಹವು ನಕ್ಷತ್ರಪ್ರಣತಿ
ಬನ್ನಿ ತಾಯಿಗೆ ನಮಿಪೆವು,

ರಾಷ್ಟ್ರಪಿತ ಗಾಂಧೀ ಮಹಾತ್ಮ
ಇಟ್ಟ ಹೆಜ್ಜೆಯ ಹಿಡಿದು ಸರ್ವರು
ಮಾಸದಿಹ ಪರಿ ಅವನ ಹೆಸರು
ನಾಡ ತಾಯಿಗೆ ನಮಿಪೆವು.

ಎಲ್ಲರೂ ತಾಯೊಲವ ಮಕ್ಕಳು
ಎಲ್ಲರೊಂದೇ ಮನೆಯ ಒಕ್ಕಲು
ಸರ್ವರಿಗು ಸಮಪಾಲು ಸಿಕ್ಕಲು
ನಲಿವ ತಾಯಿಗೆ ನಮಿಪೆವು.

ಯಾವ ಹಗೆಯೇ ಬಂದರೂ ಸರಿ
ತಾಯ ಕೂದಲು ಕೊಂಕದಿಹ ಪರಿ
ಅರಿ ಗಜಕೆ ಆಗುತ್ತ ಕೇಸರಿ
ನಾಡ ತಾಯಿಗೆ ನಮಿಪೆವು,

೧೯೬೪

# ಎಲ್ಲಿತ್ತು ಮೊದಲು ?

ಎಲ್ಲಿತ್ತು ಮೊದಲು, ಎಲ್ಲಿತ್ತು?
ಈ ನೋಟ ಈ ಪಾಟ ಈ ನಮ್ಮ ನಲಿದಾಟ
ಎಲ್ಲಿತ್ತು ಮೊದಲು, ಎಲ್ಲಿತ್ತು?

ಎಲ್ಲಿತ್ತು ಈ ಗೀತ ? ನಾಡಿಂದು ನಿರ್ಭೀತ !
ಕತೆಯು ಸಂಗತಿ ನಮ್ಮ ದಾಸ್ಯಭೂತ –
ಕಲ್ಲಿಗೂ ಬಿಡುಗಡೆ ; ನಾಡು ನಾಡೇ ನಾಡೆ
ಎಚ್ಚೆತ್ತು ಆಡುತಿದೆ ನಾಗರಹೆಡೆ.

ನೆಲ ಜಲ ಮಲೆ ಕಾನು ಮೂಗಡಲು ಮೇಲ್‌ಬಾನು
ತಗ್ಗಿ ಬಗ್ಗಿವೆ ಜ್ಞಾನದಂಡದಾಣತಿಗೆ ;
ಬಿಲ್‌ಬಿಟ್ಟ ಬಾಣದೊಲು ಕಣ್ಣಳತೆ ಕಾಣದೊಲು
ವರುಷಗಳ ದಾಟುತಿವೆ ಯುಗದ ಗತಿಗೆ.

ದಿಳ್ಳಿ ಹಳ್ಳಿಗೆ ಸುಗ್ಗಿ ಮುಗ್ಧತೆಯು ಮುತ್ತಿಟ್ಟು
ಹೊಸ ಪುಲಕ ತರುತಿಹುದು ಲಜ್ಜೆ ಮೈಗೆ ;
ಅಲ್ಲಿಗಿಲ್ಲಿನ ನಂಟು ಚಿಗುತ ಮಲ್ಲಿಗೆಯಂಟು –
ಅಗೊ ಅಲ್ಲಿ ಆಗಲೇ ಮುಡಿಮಲ್ಲಿಗೆ !

ಏನು ಗಂಡಿನ ಕೆಲೆತ ! ಏನು ಹೆಣ್ಣಿನ ಒಲೆತ !
ಎಲ್ಲಿತ್ತು ಈ ಗಾಡಿ ಈ ಸಡಗರ ?
ಬಾನ ಬಿಡುಗಣ್ಣವರು ಕೆಳಗೆ ನೋಡುತ್ತಿಹರು –
ತೆಗೆ ತೆಗೆ ! ನಮಗೇತಕಿನ್ನು ಅವರ ವರ ?

ಕೆಲವು ಕರುಬಿನ ಕಣ್ಣು ಕೆಲವು ಮೆಚ್ಚುಗೆಗಣ್ಣು
ದಿಟ್ಟಿಸಿವೆ ನಾವಿಟ್ಟ ದಿಟ್ಟನಡೆಯ –
ಕೆಲಕೆ ತಿರುಗದೆ ಇದಿರು ನೇರ ದಾರಿಯ ಹಿಡಿದು
ಸಾಗೋಣ – ಸಲಹುವನು ಸಕಲಕೊಡೆಯ.

# ನಮ್ಮ ಹಿಮಾಲಯ

(ಮೇಳಗೀತ : ಇದೇ ಹೆಸರಿನ ಗೀತರೂಪಕದಿಂದ)

**ಸಮಗ್ರಮೇಳ**

ನಮೋ ನಮೋ ಹಿಮಾಲಯಂ
ನಮಶ್ಶ್ರೀಮಾಧವಾಲಯಂ
ನಮೋ ನಮೋ ಭವಾಲಯಂ
ನಮಸ್ಸದಾಶಿವಾಲಯಂ.

**ಪೂರ್ವ ಮೇಳ (ಅರ್ಧ)**

ಇದು ಗಿರಿಜಾ ಕಲ್ಯಾಣದ ಹಸೆಮಣೆ
    ಪವಿತ್ರ ನದಿಗಳ ತವರುಮನೆ
ವಿಶ್ವದಲ್ಲಿ ಇದಕೆಲ್ಲಿದೆ ಪೆಗಲೆಣೆ
    'ಶಿವ ಸುಂದರ ಸತ್ಯ'ಗಳ ತೆನೆ.

**ಅಪರ ಮೇಳ (ಅರ್ಧ)**

ಸಾಹಸವಂತರಿಗಿದು ನೀಡುತ್ತಿದೆ
    ನಿತ್ಯ ನಿರಂತರದಾಹ್ವಾನ
'ಸೋಹಂಸೋಹಂ' ಸಂಗೀತವನು
    ತರಂಗಿಸುತ್ತಿದೆ ಗಿರಿ ಗಾನ.

**ಸಮಗ್ರ ಮೇಳ**

ನಮ್ಮ ಹಿಮಾಲಯ ನಮ್ಮ ಹಿಮಾಲಯ
ಇದು ಗೌರೀಶಂಕರ ನಿಲಯ
ಜುಮ್ಮೆನಿಸುವುದಿದು ಹೊಗಳುವ ಭಾರತ-
ಕವಿಗಳ ಪುಲಕದ ಮೈಯ.

**ಮೇಳನಾಯಕ**

ಶತಮಾನಗಳ ಶಾಂತಿ ಘನಿಸಿಹುದು ಹಿಮವಾಗಿ
ಹಿಮವಂತನಚಲತಪ ನಿಂದಿಹನು ಶಿವಯೋಗಿ
ಸೂರ್ಯಚಂದ್ರರು ತಂಗಿ ತೆರಳುವರು ಶಿರ ಬಾಗಿ
ಲಕ್ಷತಾರಾಕ್ಷ ನಭ ನೋಡುತಿದೆ ಬೆರಗಾಗಿ.

**ಸಮಗ್ರ ಮೇಳ**

ನಮೋ ನಮೋ ಹಿಮಾಲಯಂ
ನಮೋ ನಮೋ ಉಮಾಲಯಂ

**ಪೂರ್ವಾರ್ಧ**

ಭರತಖಂಡದ ಸರ್ವಗಾವಲು
ಕಾಯುತಿಹನೀ ಗಿರಿವರ
ಸುರರು ನೋಡುತ ಪುಣ್ಯಭೂಮಿಯ
ಧನ್ಯತೆಯ ಕರುಬುವ ತೆರ.

**ಅಪರಾರ್ಧ**

ಇದುವೆ ಭಾರತ ಭೂರಮೆಯು ಮುಡಿ
ಶಿಖರ ಪಂಕ್ತಿಯು ಬಯ್ತಲೆ
ದಿವ್ಯ ಗಂಗಾಸ್ನಾತವಿದು ಮಡಿ
ಸಚ್ಚಿದಾನಂದದ ಕಳೆ.

**ಪೂರ್ವಾರ್ಧ**

ಭವದ ತೊಟ್ಟಿಲು ಶಿವದ ಮೆಟ್ಟಿಲು
ಸಾಧಕರ ತಪದೊಟ್ಟಿಲು
ಜವನನಟ್ಟಲು ದಿವವ ಮುಟ್ಟಲು
ತಾಣ ಸೇತುವೆ ಕಟ್ಟಲು.

**ಸಮಗ್ರಮೇಳ**

ನಮೋ ಶಿವಾಧವಾಲಯಂ
ನಮೋ ನವೋನವಾಲಯಂ.

೧೯೬೪

# ಕವಿವಾಣಿಗೆ ಸ್ವಾಗತ

ಸ್ವಾಗತ ಸ್ವಾಗತ ಸ್ವಾಗತ
ಸ್ವಾಗತವು ಕವಿವಾಣಿಗೆ !
ರಾಗ-ಕೋಗಿಲೆ ಕಹಳೆಯಾಗೆಲೆ
ಕರೆದು ಯುದ್ಧಕ್ಷೋಣಿಗೆ !

ಕತ್ತಿಗಿಂತಲು ಹರಿತ ಲೇಖನಿ
ಎಂಬ ಮಾತನು ಸಾಣೆಗೆ
ಒತ್ತಿ ಹಿಡಿಯುವ ಕಾಲ ಬಂದಿದೆ–
ಬೇರೆ ಶ್ರುತಿ ಕವಿವೀಣೆಗೆ.

ನಿನ್ನ ನುಡಿಯಲಿ ಕ್ಷಾತ್ರ ಸಿಡಿಯಲಿ
ಎಚ್ಚರಿಸು ನೀ ನಾಡನು !
ಛಿನ್ನಗೈಯುಲು ಛನ್ನ ಕ್ಲೈಬ್ಯವ
ಉಚ್ಚರಿಸು ಹೊಸ ಹಾಡನು.

ಕರದೆ ಮುರಳಿ ಭರದೆ ಕೆರಳಿ
ಪಾಂಚಜನ್ಯವೆ ಆಗಲಿ !
ಭೋಂಭೊಭೋಂಭೋಂ ಧ್ವಾನ ಧಾವಿಸಿ
ಕಲ್ಲನೆಬ್ಬಿಸಿ ಕೂಗಲಿ !

ನಾಡ ವೀರದ ನವ್ಯ ಪಾರ್ಥಗೆ
ಒದಗಿ ಕವಿತಾಸಾರಥಿ
ಕೂಡಿಕೊಳ್ಳಲಿ ನಮ್ಮ ಧರ್ಮದ
ಯುದ್ಧಪಕ್ಷವ ಜಯಸತಿ !

೧೭-೭-೧೯೬೫

# ಸ್ವರ್ಣದ್ವೀಪ

ಅಲ್ಲಿ ಅದೋ ಸ್ವರ್ಣದ್ವೀಪ,
  ನುಗ್ಗಿ ಸಾಗು ಮುಂದಕೆ!
ದಾರಿಯಲ್ಲಿ ಬಿಸಿಲ ತಾಪ-
  ವೆಂದು ಹಿಂದುಹಿಂದಕೆ
ಸರಿಯಬೇಡ ; ಕಲ್ಲು ಮುಳ್ಳು
  ಎಂದು ಹೇಡಿ ಬೆದರಿಸೆ
ನಿಲುವೆಯೇಕೆ ? ತಳ್ಳು ಪೊಳ್ಳು
  ಬೆದರಿಕೆಗಳನಾ ಕಡೆ.

ದಾರಿ ಸವೆಯದೆಂದಿಗೂ
  ಎಂಬ ಚಿಂತೆಯೇತಕೆ ?
ಹಾರಿ ದಾಟಬೇಕೆಂಬ
  ತವಕ ತಾನೇತಕೆ ?
ನಡೆದು ನಡೆದು ನಡೆಯುತಿರಲು
  ಕೊನೆಗೆ ಸಿಕ್ಕದೇ ಗುರಿ ?
ನಿಂತ ಜಾಗದಲ್ಲಿ ನಿಂತು
  ಗೊಣಗೆ ಹೇಡಿಯೇ ಸರಿ.

ದ್ವೀಪವನ್ನು ಸುತ್ತುಗಟ್ಟಿ
  ಕಡಲಾರ್ಭಟಿಸಿರುವುದು ;

ದಾರಿ ನಡೆದು ಸಾಗಲೇನು ?
　ಕಡಲಿನಡ್ಡಿಯಿರುವುದು–
ಎಂದು ಬಂದ ದಾರಿಯಲ್ಲೆ
　ಹಿಂಮರಳಲು ತರವೆ ?
ಒಂದೇ ಮನದಲ್ಲಿ ದುಮುಕು–
　ಕಡಲಾಗದೆ ಕಾಲವೆ ?

ಗೆಲವಿನಲ್ಲಿ ಮನವನಿಟ್ಟು
　ಸಾಗು ನುಗ್ಗು ಮುಂದಕೆ ;
ಜಲದ ಬಲವೆ ಹೊಡೆವ ಹುಟ್ಟು,
　ದೃಢಶ್ರದ್ಧೆಯೆ ನೌಕೆ ;
ವಿಧಿಯು ಗಾಳಿಯೊದಗಿ ಬರಲು
　ಒಳ್ಳಿತಾಯ್ತು ಪಯಣಕೆ ;
ಕಡಲ ಕಲಕುತಡ್ಡ ಬರಲು
　ಸಿದ್ಧನಾಗು ಯುದ್ಧಕೆ.

ಬಾಯ ತೆರೆದು ತೋಳನೆತ್ತಿ
　ಕಡಲು ಮೊರೆಯುತಿರುವುದು ;
ಸ್ವರ್ಣದ್ವೀಪವದೋ ಅಲ್ಲಿ
　ನಿನ್ನ ಕರೆಯುತಿರುವುದು ;
ದೈವವನ್ನು ನೆನೆದು ಮನದಿ
　ದುಮುಕು ಕಡಲಿನಾಳಕೆ ;
ದೈವವೊಲಿಯೆ ಗುರಿ ಮುಟ್ಟುವೆ
　ತೇಲಿಬಂದು ಮೇಲಕೆ

೧೯೩೩ : "ಹಕ್ಕಿ ಹಾಡು"

# ಕರ್ಮವೀರನೆನಿಸಯ್ಯ

ದುರ್ಬಲರಹಿಂಸೆಯನು ದೂರವಿರಿಸಯ್ಯ
ಕರ್ಬೊನ್ನ ಕಾಯವನು ಪಡೆದು ಕೊಲ್ಲದಿರಯ್ಯ ॥ ಪ ॥

ಕಯ್ಯಲಾಗದ ಹೇಡಿಯೆಂದೆನಿಸಿಕೊಳ್ಳದಿರು ;
ಮೆಯ್ಯೊಳಾರ್ಪಿಲ್ಲವೆಂದೆನಿಸಿಕೊಳ್ಳದಿರು ;
ಬಯ್ಯಲವನಿಗೆ ಬಾಯೆ ಇಲ್ಲವೆನದಿರಲಿ ;
ಸುಯ್ಯಲವನಿಗೆ ಉಸಿರೆ ಇಲ್ಲವೆನದಿರಲಿ.

ನಿನ್ನದಟನರಿತು ಅರಿ ಬೆದರುತಿರಲಿ ;
ನಿನ್ನ ಪೌರುಷ ತೇಜ ಕೆದರುತಿರಲಿ ;
'ಬನ್ನಪಡುವೆವು ನಾವು ಈ ನಾಡ ಕೆಣಕೆ' ಎಂ–
ದೆನ್ನುವಂತಿರಲಯ್ಯ ನಾಡು ನಿನ್ನಿಂದ.

ಕತ್ತಿ ಒರೆಯೊಳಗಿರಲಿ ಕೆಚ್ಚು ಎದೆಯೊಳಗಿರಲಿ,
ಎತ್ತೆದಾ ಕೈ ತಾಳು ತಾಳೆನ್ನುತಿರಲಿ ;
ಮುತ್ತಿನಂತಹ ನಯದ ನುಡಿ ನಲಿಗೆ ವದನದಲಿ ;
ತೆತ್ತು ಜೀವವ ಹೋರೆ ಮನ ಸಿದ್ಧವಿರಲಿ.

ಹೇಡಿ ಹುಳುಬಾಳಿಗಿಂ ವೀರ ಮರಣವೆ ಮೇಲು ;
ನಾಡಿಗಾತ್ಮಾರ್ಪಣವು ನಿನ್ನ ಸುಕೃತಫಲ :
ಬಾಡಿಸುವೆಯೇಕೆ ನಿನ್ನಾತ್ಮಕುಸುಮವ ಬರಿದೆ ?
ನೀಡಯ್ಯ, ಭಾರತಾಂಬೆಯ ಪೂಜೆ ಸಲಲಿ.

'ಅರಿಭಯಂಕರನಾದೊಡೇನಹಿಂಸೆಯ ಮೂರ್ತಿ ;
ಸರುವರ ಸಹೃದಯನೀ ಭಾರತೀಯ ;
ಧರೆಯ ಶಾಂತಿಯ ಕಾವ ಧರ್ಮಭಟನಿವನಯ್ಯ ;
ಪರಮ ಸಾತ್ವಿಕನಾಗಿಯೂ ಪುರುಷಸಿಂಹ !'–

ಎಂದೆಲ್ಲ ಲೋಕ ಕೊಂಡಾಡುವೊಲು ಧರ್ಮವನು
ಮುಂದಿಟ್ಟು, ಪಾಲಿಸುತ ಯೋಗವಹ ಕರ್ಮವನು,
ಸಂದೇಹಕೆಡೆಯಿಲ್ಲದೊಲು ಬಾಳ ಮರ್ಮವನು
ಚೆಂದದೊಳು ಮೆರೆ, ಕರ್ಮವೀರನೆನಿಸಯ್ಯ !

೧೬–೮–೧೯೪೭ : "ರಾಷ್ಟ್ರ ರಥ"

# ಬಾಳು ಕುಲುಮೆ

ಹಿರಿಬಾಳೊ ಕಿರಿಬಾಳೊ ಸೊಗಬಾಳೊ ತೆಗೆಬಾಳೊ,
        ತನ್ನ ಬಾಳನು ತಾನು ಬದುಕುವುದೆ ಗೆಲುಮೆ ;
ಕೊರಗು ಕುಗ್ಗಿಸೆ ಮನವ ಬಾಳ ಜರೆಯಲದೇಕೆ ?
        ಅರಿತು ಬದುಕುವ ಆಳ್ಗೆ ಬಾಳೊಂದು ಕುಲುಮೆ.

ಆಶೆ ತಿದಿಯೊತ್ತು ; ಅದರಿಂ ನಿರಾಶೆಯ ಗಾಳಿ ;
        ಹೃದಯ ಕಿಡಿಗೊಳ್ಳೆ ಹೊರಡುವ ಕೊರಗು ಸುಯ್ಲು ;
ತನು ಕಾದು ಕೆಂಪೇರೆ, ಬಾಳ ಸಂಕಷ್ಟಗಳು
        ಅದ ತಿದ್ದೆ ಕಮ್ಮಾರ ವಿಧಿ ಹೊಡೆವ ಹೊಯ್ಲು.

ಬಾಳ ಕುಲುಮೆಗೆ ಬಿದ್ದು, ಅದರಿಂದ ಮತ್ತೆದ್ದು
        ನಿಂತವನೆ ಹಿರಿಯಾಳು–ವಿಧಿಯವನ ತೊತ್ತು.
ಬಾಳ ಕಾವಿಗೆ ಬೆದರಿ ಬೆನ್ನಿತ್ತರೇನು ? ವಿಧಿ
        ಬಿಡದು : ಬೀಳ್ವನು ವಿಧಿಯ ಬಾಯ್ಗವನು ತುತ್ತು.

೧೯೩೭ : "ಪಕ್ಕಿ ಹಾಡು"

# ಭಾರತದ ಮನೆತನ

ಭಾರತದ ಮನೆಯಲ್ಲಿ ಭಾರತ –
ರೆಲ್ಲರೊಂದೇ ಮನೆತನ ;
ಯಾರೆ ಮನೆಯನ್ನೊಡೆಯ ಬಂದರು
ಕೋಟೆಯಾಗಲಿ ಒಮ್ಮನ.

ಒರೆಯೊಳಿದೆ ಹೊಳೆಹೊಳೆವ ಖಡ್ಗವು,
ಯಾರನೂ ನಾವ್ ಕೊಲ್ಲೆವು ;
ಕರೆದು ಯುದ್ಧಕೆ ಕೆಣಕಿ ನಿಂತರೆ
ಹೇಡಿಯೆನಿಸುತ ನಿಲ್ಲೆವು.

ನೂರು ಭೇದಗಳಿರಲಿ ಹೊರಗಡೆ,
ಒಂದೆ ಕರುಳಿನ ಮಕ್ಕಳು ;
ಹಾರದಲಿ ಹೂ ಹಲವು ಬಗೆ, ದಿಟ ;
ದಾರವೊಂದೇ ಕಟ್ಟಲು.

ಭಾಷೆ ಮತ ಪ್ರಾಂತಾಭಿಮಾನವು
ಅಡ್ಡಿಯೆನಿಸದು ದೇಶಕೆ ;
ಸಾಸಿರದೆ ರತ್ನಗಳ ತುಂಬಲಿ,
ನಮ್ಮ ಸಂಸ್ಕೃತಿ ಕೋಶಕೆ.

ನಮ್ಮ ಸಂಸ್ಕೃತಿಯುಡಿಯು ಕಟ್ಟಡ
ನೂತ್ನ ಜೀವನ ಭವನಕೆ ;
ಬಿಮ್ಮನದ ಮತಿಗೆಟ್ಟು ಮುರಿದರೆ
ನಷ್ಟವಲ್ಲವೆ ಭುವನಕೆ ?

ಅತ್ತ ರಷ್ಯಾ ಇತ್ತ ಅಮೆರಿಕ
ಉತ್ತ ನೂತನ ಚೀಣವು ;
ಮಿತ್ತುವವರೆಳೆಬಲೆಗೆ ಬಿದ್ದರೆ,
ಬಿಡುಗಡೆಗೆ ವಿಷಬಾಣವು,

ಹಿಂಸೆಯಿಂ ಸಮತೆಯನು ಸಾಧಿಪೆ
ಆತ್ಮನಾಶಕ ವೃತ್ತಿಗೆ
ಭ್ರಂಶಗೊಳ್ಳುತ ಒಲಿದೆವಾದರೆ
ಕೊಲೆಗೆ ದೇಶವು ಗುತ್ತಿಗೆ.

ಪ್ರೇಮದಿಂದಲೆ ರಾಮರಾಜ್ಯವ
ಪಡೆವ ಕಲೆಯನು ಕಲಿತಿರೆ
ಪಾಮರ ಪ್ರಭುತನಕೆ ಪಟ್ಟವ
ಕಟ್ಟುವಾ ಕೊಲೆಯೇತಕೆ ?

ಕವಿಯು ವಾಣಿ ನುಡಿವುದೆಚ್ಚರ :
ಬಡವರೊಡಲನು ಹೊರೆಯದೆ,
ಶಿವನೆ ಭೈರವನಾಗಿ ಬರುವನು
ಕ್ರಾಂತಿರೂಪದಿ, ಕರೆಯದೆ.

ಖಚಿತಗೊಳ್ಳಲಿ ನಮ್ಮ ನಿರ್ಧರ-
ವಿಂದು, ದೀನದರಿದ್ರರ
ಉಚಿತಮಾರ್ಗದಿ ಪೊರೆಯುತೆತ್ತುವ
ಗೈಮೆಗದೆ ಬಿಡುಗಡೆ ವರ.

೧೯೫೪ : "ರಾಷ್ಟ್ರದಿನೋತ್ಸವ ಗೀತ"

# ಅಮೃತ ಸ್ವಾತಂತ್ರ್ಯ

ಗಳಿಸಿಕೊಂಡೆವು ಅಂದು ಸ್ವಾತಂತ್ರ್ಯಭಾಗ್ಯವನು
ಉಳಿಸಿಕೊಳ್ಳುವೆವೇನು ಅದನು ಮುಂದಿನ್ನು ?

ಜಾತಿ ಮತ ಪಂಥಗಳ ಭೇದಗಳನೇ ಹಿಡಿದು
ರೀತಿ ನೀತಿಯು ತೊರೆದು, ಗುಣಕೆ ಮನ್ನಡೆ ತಡೆದು,
ಭೀತಿಯನ್ನೊಡ್ಡಿ ಜನತೆಯು ಹಕ್ಕುಗಳ ಕಡಿವ
ಸರ್ವಾಧಿಕಾರ ಬರೆ ಸ್ವಾತಂತ್ರ್ಯವೆ ?

ಬಡವ ಬಲ್ಲಿದನೆಂಬ ಭೇದಗಳು ಇನ್ನುಳಿಯೆ
ಅವರಿಬ್ಬರೊಳದ್ವೇಷದುರಿ ಹೊತ್ತಿ ಬಲು ಬೆಳೆಯೆ
ನಾಡೊಳು ಅಶಾಂತಿ ಅಂತಃಕಲಹಗಳು ಮೊಳೆಯೆ–
ಕಾದಾಡುವಾ ಹಕ್ಕೆ ಸ್ವಾತಂತ್ರ್ಯವೆ ?

ಅರೆಹೊಟ್ಟೆ ತಿನ್ನುವುದೆ ನಿತ್ಯ ನಿಯಮವಾಗೆ
ಆರದಿನ್ನೂ ಉಳಿಯೆ ಬಡತನದ ಬಿರು ಬೇಗೆ
ಊರು ಕೇರಿಗಳಲ್ಲಿ ಭಿಕ್ಷುಕರ ಬೀಡಾಗೆ
ಸಾವು ಬದುಕಿನ ನರಕ ಸ್ವಾತಂತ್ರ್ಯವೆ ?

ನಾಡ ಮಕ್ಕಳು ಮಂದಿ ಅಜ್ಞಾನದಲಿ ಮುಳುಗಿ
ಎಲ್ಲೋ ಹಲಕೆಲರು ಪಂಡಿತರೆನಿಸಿ ಬೆಳಗಿ
ಸ್ವಾರ್ಥಸಾಧಕರ ಪಡೆ ನಾಡೆಲ್ಲ ತಿರುಗುತಿರೆ
ಅವರ ತಾಳಕೆ ಕುಣಿಯೆ ಸ್ವಾತಂತ್ರ್ಯವೆ ?

ಸಾಮ್ಯವಾದದ ಹೆಸರ ಹಲಗೆಯನು ಮುಂದಿಟ್ಟು
ವಿಜ್ಞಾನಯುಗವೆಂದು ಧರ್ಮವನು ಕಟ್ಟಿಟ್ಟು
ಪ್ರಾಚೀನ ಸಂಸ್ಕೃತಿಯ ಸುಟ್ಟು ಕರಿಬೊಟ್ಟಿಟ್ಟು
ಮುಂದುವರಿಯುವೆವೆನಲು ಸ್ವಾತಂತ್ರ್ಯವೆ ?

ನಮ್ಮ ನಡೆ ನುಡಿ ನೋಟ ನಮ್ಮ ನಯ ನೀತಿ ನೆಲೆ
ನಮ್ಮ ನಾಡಿನ ಜ್ಞಾನಭಂಡಾರದತುಳ ಬೆಲೆ
ಧರ್ಮಬಾಹಿರ ಯಂತ್ರಜೀವನದಿನಾಗೆ ಕೊಲೆ
'ಸಾವು ಸಾವಲ್ಲದಿಹ' ಬದುಕು ಸ್ವಾತಂತ್ರ್ಯವೆ ?

ತನ್ನ ನಂಬಿದ ಬೆಳಕ ಹಿಡಿದು ನಿಲಲಾಗದಿರೆ
ತನ್ನ ಕಾಣ್ಕೆಯ ನಿಜವ ನುಡಿಯಲನುವಿಲ್ಲದಿರೆ
ತನ್ನ ಇಚ್ಛೆಯ ಬಾಳ್ಕೆ ನಡಸಲೆಡೆಯಿಲ್ಲದಿರೆ
ದೊರೆತ ಸ್ವಾತಂತ್ರ್ಯವದು ಸ್ವಾತಂತ್ರ್ಯವೆ?

ದೇವನೆದುರಿನಲೆಲ್ಲ ಸರ್ವಸಮರೆನಿಸುತ್ತ
ಧರ್ಮ ನೆಲೆತಪ್ಪದೊಲು ಸಮತೆಯುನು ಸಾಧಿಸುತ
ಇಹದ ಹಾಲಿಗೆ ಪರದ ಸಕ್ಕರೆಯು ಬೆರಸುತ್ತ
ಬಾಳಲಪ್ಪುದೆ ಅಮೃತ ಸ್ವಾತಂತ್ರ್ಯವಲ್ತೆ ?

# ಸ್ವಾತಂತ್ರ್ಯಸಿದ್ಧಿ

ಬಂತು ಬಂತು ಸ್ವಾತಂತ್ರ್ಯವೆಂಬ ಸವಿ
ಮಾತಿನ ಮಳೆಯಾಯ್ತು:
ಎಂತದನುಳಿಸುವುದೆನ್ನುವನಿತರೊಳೆ
ನಾಡೇ ಹೋಳಾಯ್ತು.

ಹೋಳಿನೊಳಗೆ ಹುಳು ನೂರು ಸೇರಿ ಕೊರೆ-
ಕೊರೆಯುತ್ತಿದೆ ತಿರುಳ:
ಪಾಲಿಗೆ ಬಂದುದನುಳಿಸಿಕೊಳ್ಳದಿರೆ,
ಹೇಳು, ಯಾರು ಮರುಳ ?

ಧನಿಕವೃಂದ ಧನ ಸಂಚಯ ನಿಮಗ್ನ,
ಬಡವರೊ–ಭೀಕರ ನಗ್ನ:
ಸ್ವಾರ್ಥಿಗಳರ್ಥಾಕಾಂಕ್ಷಿಗಳೆತ್ತಲೊ
ಗಾಳಿಯತ್ತ ಕಡೆ ಗಮನ.

ಸತ್ಯ ಅಹಿಂಸೆ ಮಂತ್ರವಾಯ್ತು ಬರಿ
ತಂತ್ರವಾಯ್ತು ಜನಕೆ:
ನಿತ್ಯಜೀವನದೊಳವರ ಸುಳಿವ ಸೆಳಿ
ಸೋಕದಾಯ್ತು ಮನಕೆ.

ಅಶೋಕ ಚಕ್ರವನೊತ್ತಿತು ಜನತೆ
ಬಾವುಟ ಬಟ್ಟೆಯಲಿ ;
ವಿಶಾಲ ತತ್ತ್ವವನದ ದೂಡಿತ್ತು
ಬಾಳಿನ ಬಟ್ಟೆಯಲಿ.

ಮಂದಿರ ಮಂದಿರಗಳ ಮೇಲಾ ಧ್ವಜ
ಓಲಾಡುತ್ತಿದೆ ತೂಗಿ ;
ಜನಮನೋಭವನಗಳ ಮೇಲಯ್ಯೋ
ಜೋಲಿದೆ ತೂತಾಗಿ !

ಮನೆ ಗೋಡೆಯ ಮೇಲಲಂಕರಿಸಿಹುದು
ಗಾಂಧಿ ಮಹಾತ್ಮನ ಚಿತ್ರ ;
ಮನದ ಗೋಡೆ ಬರಿ ಶೂನ್ಯ ಶೂನ್ಯ, ಅಹ !
ತಂದೆಯ ಪೂಜೆ ವಿಚಿತ್ರ !

ತಲೆಯ ಮೇಲೆ ಬಿಳಿ ಖಾದಿಯ ಟೋಪಿ
ತಲೆಯೊಳಗಿನ ಮನ ಹೊಲಸು. ಮಸಿ ;
ತಳೆದರೇನು ಖಾದಿಯ ವಸನವನು
ಒಳಗಿರೆ ವಿಷಕೆಣೆಯಾದ ಮಸಿ.

ಹೊಲಸು ಜೀವನವ ಮುಚ್ಚಲು ಕಾವಿಯು
ಧರಿಸಲಹನೆ ತಾ ಸಂನ್ಯಾಸಿ ?
ಹಲವು ನೀತಿಯನು ನುಡಿದು ನಡೆಯದಿರೆ
ಏತಕಹೆಯೊ ಬರಿ ಖಾದಿಯ ವೇಷಿ ?

ನೀತಿಯ ಬಿಡದಿಹ ಬಾಳಿನ ಹಾದಿ
ಲಾಂಛನವಲ್ಲದ ಪವಿತ್ರ ಖಾದಿ ;
ಕಾಯ್ದು ಬಿಡುಗಡೆಯ ನಾಡನು ಕಟ್ಟಲು
ಇದುವೇ ಅಡಿಗಟ್ಟಡದಾದಿ.

ಶತಚ್ಛಿದ್ರವಾಗಿಹುದು ನಾಡಿಂದು
ಬೇರೆ ಬೇರೆ ಮತ ನಂಬಿಕೆಗಳಲಿ ;
ಸತತ ನಮ್ಮ ಸೇವಾ ಪೂಜೆಯೆಲ್ಲ
ಭಾರತ ಮಾತೆಗೆ ಸಲಲಿ.

ದೇಶಭಕ್ತಿ ಜಲವನ್ನು ಚಿಮುಕಿಸಲು
ಭಿನ್ನ ಭಾವ ಬಗೆಬಗೆ ಹೂವು ;
ದ್ವೇಷಾಸೂಯೆಯ ಮದ್ದಿನೊಳರೆದರೆ
ಸಿಡಿವುದದರಿಂದ ಸಾವು.

ಭೇದಗಳನು ಬದಿಗೊತ್ತುತ ಬದುಕುವ
ದಾರಿಯನಿಂದೇ ಹಿಡಿದು
ಸಾಧಿಸೋಣ ಸ್ವಾತಂತ್ರ್ಯ ಸಿದ್ಧಿಯನು
ನಾಡಿಗಾಗಿ ದುಡಿದುಡಿದು

ಸತ್ಯದ ಚರಕವ ತಿರುಗಿರಿಸಿ,
ನಿತ್ಯವಹಿಂಸೆಯ ನೂಲು ತೆಗೆಯಿರಿ,
ಶುದ್ಧ ಜೀವನದ ವಸನವ ಧರಿಸಿರಿ ;
ಸಿದ್ಧಿ ಕಯ್ಯ ಫಲ : ನಂಬಿ ನಡೆಯಿರಿ.

೧೯೪೮ : "ರಾಷ್ಟ್ರರಥ"

# ಭಾರತ ಭವಿಷ್ಯವನು ಬರೆವನಾರು ?

ಅದೊ ನೋಡು ! ಹೊಲದಲ್ಲಿ ನೇಗಿಲನು ಬಲ್ವಿಡಿದು
ಮೈಬೆವರಿನಿಂದುತ್ತ ಮಣ್ ನೆನೆವರಂ ದುಡಿದು
ಹೆರವರಿಗೆ ಹೊನ್‌ಬೆಳೆಯು ತೆಗೆಯೆ ಜೀವವ ತೇದು
ನೇಗಿಲಿನ ರೇಖೆಯಿಂ ದುಡಿವ ಬಾಳ್‌ನೆತ್ತರಿಂ
ಭಾರತ ಭವಿಷ್ಯವನು ಬರೆವನವನು
ನೆಲ ತಾಯ ನಲ್ಗುವರ–ಬಡರೈತನು.

ಮತ್ತದೋ ನೋಡಲ್ಲಿ ! ಯಂತ್ರಶಾಲೆಗಳಲ್ಲಿ–
ಯಂತ್ರಗಳ ನಡುವೆ ತಾನೊಂದು ಯಂತ್ರವೆ ಆಗಿ
ಹೆರರ ಸೌಖ್ಯಕೆ ತನ್ನ ಬಾಳ ಸವಿಯನೆ ನೀಗಿ
ಮೌನವೇ ಮಸಿಯಾಗೆ ಗೈಮೆ ಲೇಖನಿಯಾಗೆ
ಭಾರತ ಭವಿಷ್ಯವನು ಬರೆವನವನು
ಕರ್ಮಯೋಗಕೆ ಕಲಶವಿಡುವ ಕಾರ್ಮಿಕನು.

ಇತ್ತ ನಿರುಕಿಸು ! ಶಸ್ತ್ರಸನ್ನದ್ಧನಾಗಿಯುಂ
ತಾನಹಿಂಸಾ ಸತ್ಯ ತತ್ತ್ವಕ್ಕೆ ತಲೆಬಾಗಿ
ಹೆರರ ನೆಲಕಾಶಿಸದೆ ತಾಯ್‌ನೆಲಕೆ ಮುಡಿಪಾಗಿ
ತನ್ನ ಬಾಳನ್ನಿರಿಸಿ, ಇಳೆ ಮೆಚ್ಚುವಪಟಿನಿಂ
ಭಾರತ ಭವಿಷ್ಯವನು ಬರೆವನವನು
ಧರ್ಮಯುದ್ಧಕ್ಕಳುಕದಿಹ ವೀರಭಟನು.

ಮೇಣದೋ ! ವಿಜ್ಞಾನಶಾಲೆಯಲಿ ಭೇದಿಸುತ
ಪ್ರಕೃತಿಯ ರಹಸ್ಯವನು, ಸತ್ಯವನು ಶೋಧಿಸುತ,
ನಾಡ ಮಣ್ಣನು ಚಿನ್ನ ಮಾಳ್ಪ ಕಲೆ ಸಾಧಿಸುತ,
ವಿಜ್ಞಾನ ಸಿದ್ಧಿಯನು ಯುದ್ಧಕೆ ನಿರೋಧಿಸುತ
ಭಾರತ ಭವಿಷ್ಯವನು ಬರೆವನವನು
ಸತ್ಯ-ಪರಮೇಶ್ವರನ ಭಕ್ತ, ವಿಜ್ಞಾನಿ.

ಮೇಣದೋ ! ಜನರೊಡನೆ ನಲವಿನಿಂ ಬೆರೆಯುತ್ತ
ಅನ್ಯಾಯವಸಮತೆ ಅಧರ್ಮಗಳ ಜರೆಯುತ್ತ
ಕಾವ್ಯಕಹಳೆಯನೂದಿ ಜನರನೆಚ್ಚರಿಸುತ್ತ
ಸತ್ಯಸೌಂದರ್ಯಗಳ ಮಂತ್ರವುಚ್ಚರಿಸುತ್ತ
ಭಾರತ ಭವಿಷ್ಯವನು ಬರೆವನವನು
ಭಾರತಿಯ ವರಪುತ್ರ ಕವಿವರ್ಯನು.

ಅದೊ ! ವಿಶಾಲ ಪ್ರಪಂಚಕೆ ಭಾರತದ ಕೀರ್ತಿ
ಹರಡಿ, ಮೇಣ್ ಗಳಿಸುತ್ತ ಹೊರದೇಶಗಳ ಆರ್ತಿ,
ದೇಶದೇಶಕೆ ನಂಟು ನೇಹಗಳ ಬಲಿಸುತ್ತ
ಯುದ್ಧವನು ನಿಲಿಸಿ ಶಾಂತಿಧ್ವಜವ ನಿಲಿಸುತ್ತ
ಭಾರತ ಭವಿಷ್ಯವನು ಬರೆದರವರು
ಸ್ವಾತಂತ್ರ್ಯ ಪಡೆದ ಭಾರತದ ನಾಯಕರು.

ಅಹ! ನೋಡು! ಕೊಂಡಾಡು ಭಕ್ತಿಯಿಂ ಪೊಡಮಡು
ಸತ್ಯ ಧರ್ಮ ಅಹಿಂಸೆಗಳಿಗಾಗಿ ಜೀವವನು
ಮುಡಿಪಿರಿಸಿ, ಬುದ್ಧದೇವನ ಧರ್ಮಚಕ್ರವನು
ಆಂತು ಚರಕವ ಗೈದು ನಡೆ ನುಡಿಯ ನೂಲಿನಿಂ
ಭಾರತ ಭವಿಷ್ಯವನು ಬರೆಯ ಕಲಿಸಿಹನವನು
ಜನತಾ ಜನಾರ್ದನನ ಭಕ್ತ ಗಾಂಧಿ ಮಹಾತ್ಮ
ಕ್ರಿಸ್ತ ಬುದ್ಧರ ಪಂತಿಯೊಳು ನಿಲುವ ಪೂತಾತ್ಮ
ಪ್ರತ್ಯಕ್ಷದೈವ ಪಾಮರರ ಪರಮಾತ್ಮ!

೧೯೪೭ : "ಅಶೋಕಚಕ್ರ"

# ಬಾರ ಬಾರ ಭಾಗ್ಯಾವತಾರ

ಬಾರ ಬಾರ ಭಾಗ್ಯಾವತಾರ ನವ ಭಾರತ ಕೃತಿಕಾರ
ತಾರ ತಾರ ನಾಡಿನ ನಾಡಿಗೆ ನವ ಚೇತನ ಸಂಚಾರ!
ವ್ರಣದ ಗಂತಿಗಳ ಕೊಯ್ದು
ನವ ಪ್ರಾಣಧಾರೆ ಹೊಯ್ದು
ನವ ಜೀವತಂತು ನೆಯ್ದು
ರೋಗ ಹಿಡಿದ ಈ ರಾಷ್ಟ್ರಪುರುಷನಿಗೆ
ಭೈಷಜವನು ಮಾಡ,
ಹೊಸ ಬಾಳನು ನೀಡ.

ನೀನು ನಿಜದೆ ತ್ರಿಗುಣಾತ್ಮಕನಯ್ಯ–ಮೆರೆಯಲಿ ತವ ಮಹಿಮೆ!
ರಕ್ಷಣ ಶಿಕ್ಷಣ ದಕ್ಷನೆನಿಸೊ ನೀ–ಬೆಳೆಯಲಿ ನಾಡೊಳುಮೆ:
ಸ್ವಾರ್ಥಸಾಧಕರ ತರಿದು
ಭೇದ ಭಾವಗಳ ಮುರಿದು
ದೀನ ದರಿದ್ರರ ಪೊರೆದು
ನೂತ್ನ ರಾಷ್ಟ್ರ ನಿರ್ಮಾಣ ಕಾರ್ಯಕ್ಕೆ
ನಿನ್ನ ಹರಕೆ ನೀಡು,
ಸರ್ವಶುಭವ ಮಾಡು.

೭–೧–೧೯೫೦ : "ರಾಷ್ಟ್ರಂಥ"

## ಜಯ ಜಯ ಹೇ ಮಹಿಷಾಸುರಮರ್ದಿನಿ

ಜಯ ಜಯ ಹೇ ಮಹಿಷಾಸುರ ಮರ್ದಿನಿ
ಜಯ ಚಾಮುಂಡಾಂಬಿಕೆ ಜನನಿ !
ಜಯ ಜಯ ಅಂಬಾ ತ್ರಿಭುವನ ಮೋಹಿನಿ
ಜಯ ಹಿಮಗಿರಿತಟ ನಿವಾಸಿನಿ

ಅನೃತ ಅಧರ್ಮದ ಕೋಡಿಂದಿರಿಯುವ
ನವ ಮಹಿಷಾಸುರನುಪಟಳವು
ಹಿಮಶೈಲದ ಶಿವಶಾಂತಿಯು ಕಲಕಿದೆ,
ಮುನಿದೆದ್ದಿದೆ ಭಾರತ ಕುಲವು.

ಸತ್ಯಧರ್ಮ ಸಂಜನಿತ ಸಾತ್ವಿಕದ
ಕ್ರೋಧದ ಕೈದುವಿದೋ ತೊಡು,
ದೈತ್ಯನ ವಧಿಸಿ ಭಾರತ ಪುತ್ರಿಯ
ಹಣೆಗೆ ಜಯದ ತಿಲಕವನು ಇಡು.

೧೫–೧–೧೯೬೩

# ಕರೆ

ತಾಯೊಬ್ಬಳೇ ನಮಗೆ ಗೊತ್ತಿರುವುದು
ತಾಯ್‌ಬೆಸಕೆ ನಾವು ಹೋಗುತ್ತಿರುವುದು ॥ಪ॥

ತಾಯ್‌ನಾಡನರಿಸೇನೆ ಸುತ್ತಿರುವುದು
ನಮ್ಮ ಪಣವದ ತರುಬಿ ಮುತ್ತಿರುವುದು
ಜನಕೋಟಿಯೀಗಲೆಚ್ಚತ್ತಿರುವುದು
ಬಲಿದಾನ ಗೈವ ಹೊಣೆ ಹೊತ್ತಿರುವುದು

ಹಗೆಯೊಡನೆ ಸಹನೆ ಬೇಸತ್ತಿರುವುದು
ಹರಿಹರಿದು ದಯೆಯೆಲ್ಲ ಬತ್ತಿರುವುದು
ಮುಯ್‌ಕೊಡಲು ರಕ್ತ ಕುದಿಯುತ್ತಿರುವುದು
ತಾಯ ಹೊಣೆ ಹರಿಬ ಕರೆಯುತ್ತಿರುವುದು

ನಮ್ಮ ಗಡಿಪಡೆ ಜೀವ ತೆತ್ತಿರುವುದು
ನಿನ್ನ ಸರದಿಗೆ ವೀಳ್ಯವಿತ್ತಿರುವುದು
ಬಾ ಬೇಗ ಬಾ ತುಸವೆ ಹೊತ್ತಿರುವುದು
ಜನ ಹರಕೆಯಾರತಿಯನೆತ್ತಿರುವುದು

# ಬಾ ಹೋರಾಡುವ

ರಕ್ಕಸರಿಕ್ಕುಳ ಹಿಡಿತಕೆ ಸಿಕ್ಕಿದೆ
ನಮ್ಮ ಪುರಾತನ ನಾಡ ಗಡಿ ;
ದಕ್ಕಿಸಿಕೊಳ್ಳುವರೆಂತೊ, ನೋಡುವ,
ಬಾ, ಹೋರಾಡುವ, ನಡಿ ನಡಿ !

ನಾಡವರೆಲ್ಲರು ನೆರೆಯಲಿ ಹೋರಲಿ,
ರಣಭೇರಿಯನು ಹೊಡಿ ಹೊಡಿ !
ಗಡಿಯ ಮುಡಿಯ ನಡುನೆತ್ತಿಯಲ್ಲಿ ನೆಡೆ
ನಾಡಿನ ಬಾವುಟ ಹಿಡಿ ಹಿಡಿ !

ಭಂಡತನದ ಉದ್ದಂಡ ವರ್ತನೆಯ
ಖಂಡಿಸೆ ಕೈದುವ ಹಿಡಿ ಹಿಡಿ !
ಗಂಡಸುತನದ ಅಖಂಡ ಪರಾಕ್ರಮ
ಮೆರೆದು ಗೆಲವು ಹೂ ಮುಡಿ ಮುಡಿ !

೨೯-೧೧-೧೯೬೨

# ನಾವೆಲ್ಲರು ಸೈನಿಕರೆ

ಬಂದಿತಿದಿಗೊ ಯುದ್ಧದ ಕರೆ ; ನಾವೆಲ್ಲರು ಸೈನಿಕರೆ
ನಾಡಿಗೊಡಲ ತೆತ್ತು ದುಡಿಯೆ, ನಿಜದಿ ನಾವು ಸೈನಿಕರೆ,
ನಾವೆಲ್ಲರು ಸೈನಿಕರೆ.

ಕಾರ್ಖಾನೆಗಳಲಿ ಸರಕು ತಯಾರಿಸುವ ಕಾರ್ಮಿಕ
ಹೊಲವನುತ್ತು ನೆಲವ ಸಗಿಸಿ ಕಣಜ ತುಂಬುವಾ ಕೃಷಿಕ
ಕಚೇರಿಯಲ್ಲಿ ಲೆಕ್ಕಪತ್ರವೊಕ್ಕಣೆಸುವ ಕರಣಿಕ
ದೇಶಭಕ್ತಿಯುಕ್ಕುವ ತೆರ ವಿದ್ಯೆ ಕಲಿಪ ಶಿಕ್ಷಕ
ನಾಡ ಕಾಪಿಗೆಂದು ದುಡಿಯೆ ನಿಜದಿ ನಾವು ಸೈನಿಕರೆ,
ನಾವೆಲ್ಲರು ಸೈನಿಕರೆ.

ತನ್ನದೆನುವ ಗಳಿಕೆಯುಳಿಕೆ ನಾಡ ನಿಧಿಗೆ ನೀಡುವ
ಹುಡುಗ ಮುದುಕ ಹೆಣ್ಣು ಗಂಡು ಕುಂಟ ಕುರುಡ ಕಡುಬಡವ
ಅತಿ ಲಾಭದ ಆಸೆ ತೊರೆದು ವಿಕ್ರಯಿಸುವ ವಣಿಕ
ನಾಡನೆಚ್ಚರಿಸೆ ನುಡಿವ ಕವಿ ಗಾಯಕ ಲೇಖಕ
ನಾಡೊಳಿಗವೆಂದು ದುಡಿಯೆ ನಾವೆಲ್ಲರು ಸೈನಿಕರೆ.
ನಾವೆಲ್ಲರು ಸೈನಿಕರೆ.

ಬೇಸರಾಸರುಳಿದು ದುಡಿದ ದುಡಿಮೆ-ಬೆವರೆ ನೆತ್ತರು
ಉತ್ಸಾಹ ನಮ್ಮ ಕವಚ, ಕೈಯು ಕೋವಿ ಹತಾರು
ಗುಂಡಿನ ಮಳೆ ಕರೆದರೂ, ದಂಡೆ ಮೇಲೆ ಬಿದ್ದರೂ
ನಿಂತ ನೆಲೆಯು ಬಿಡದೆ ದುಡಿಯೆ ನಿಂತ ನಾವು ಸರ್ವರೂ
ನಾಡಿಗಾಗಿ ಮಡಿಯು ದುಡಿಯೆ ನಾವೆಲ್ಲರು ಸೈನಿಕರೆ,
ನಾವೆಲ್ಲರು ಸೈನಿಕರೆ.

೨೪-೧೧-೧೯೬೨

# ನವಭಾರತ ವೀರನನ್ನು ಕುರಿತು

ನಂಬು ನಂಬು ವೀರನೆ ವಿಜಯಶ್ರೀ
ಕಡೆಗೆ ನಮ್ಮ ಕಡೆಗೆ ;
ತುಂಬೊಲವಿನ ತನಿಗೆಂಪಿನ ಮಾಲೆಯು
ಸೂಡುವಳೆಮ್ಮಯ ಪಡೆಗೆ.

ಯುದ್ಧಸಂಘಟನೆಯಿದು, ತಿಳಿ, ದೈವಿಕ
ಸುಪ್ತ ರಾಷ್ಟ್ರವನ್ನೆಚ್ಚರಿಸೆ ;
ಸಿದ್ಧನಾಗು ದೃಢ ಬದ್ಧನಾಗು ಈ
ವೀರಭಾಗ್ಯವನು ವರಿಸೆ.

ನಾವ್ಹೋರಾಡುವುದು ಧರ್ಮದ ಯುದ್ಧ,
ಅನುಸರಿಸಿರುವೆವು ಋಜುಮಾರ್ಗ ;
ಧಾವಿಸಿ ಸೆರೆದಿದೆ ಸುಹೃತ್ಸಹಾಯ,
ಬೆಂಬಲ ನಿಂದಿದೆ ಜನವರ್ಗ.

ಧರ್ಮಧನುಸ್ಸಿಗೆ ಸತ್ಯದ ಸಿಂಜಿನಿ
ಬಿಗಿದೆಸೆಯಲು ಬೀರದ ಬಾಣ
ಕರ್ಮಯೋಗ ಫಲಸಿದ್ಧಿ ಸಿಡಿಯುತ್ತ
ಸಿಗಿವುದು ಹಗೆಯನು ನೀ ಕಾಣ !

ನಿಶಿತವಾಗಿರಲಿ ಮತಿ ಆಯುಧ ತತಿ,
ನಿಶ್ಚಿತವಿರಲಯ್ ಗೆಲುವ ಗುರಿ ;
ವಿಷಮವೈರಿಯನು ಗೆಲ್ಲಲು ನೀನತಿ-
ಬಲನಾಗುವೆ, ಕೃಪೆದೋರಿ ಹರಿ !

ಕಡುಗಲಿ ಪಥದಲಿ ದೃಢ ನಿರ್ಧಾರದ
ಅಡಿಯಿಡು ಅಳುಕದೆ ಪಟುಭಟನೆ ;
ಎಡಬಲ ನೋಡದೆ ಕರೆ ಗುಂಡಿನ ಮಳೆ,
ಉದುರಿಸು ಅರಿ ಶಿರಗಳ ತೊಪತೊಪನೆ !

ಮೈಯ ಆರ್ಪು ಕೆಂಗೆಚ್ಚಿನ ಕೂರ್ಪು
ನೆಚ್ಚ ನೇರ್ಪು ಈ ಮುಮ್ಮೊನೆ ಶೂಲ
ರೊಯ್ಯನೆ ವೈರಿಯ ಎದೆಯನ್ನಿರಿಯಲಿ.
ತೀರಲಿ ತವರು ನೆಲದ ಸಾಲ.

ಗಡಿರೇಖೆಯ ಹಿಮಫಲಕದ ಮೇಲ್ಗಡೆ
ವೀರಶಾಸನವ ಬರೆ, ಭಟನೆ ;
ಹಿಡಿಯಲಿ ಕನ್ನಡಿ ನಿನ್ನ ಸಾಹಸಕೆ
ಅರಿರಕ್ತಾಕ್ಷರ ರಚನೆ.

ನಂಬು ನಂಬು ವೀರನೆ ವಿಜಯಶ್ರೀ
ಬಂದೇ ಬರುವಳು ನಿನ್ನೆಡೆಗೆ ;
ತುಂಬೊಲವಿನ ಜಯಮಾಲೆಯ ನಿನ್ನಯ
ಕೊರಳಿಗೆ ಹಾಕುವಳಯ್ ಕಡೆಗೆ.

೧೨-೧೨-೧೯೬೨

# ಉತ್ತರ ದಿಗ್ವಿಜಯ

ಉತ್ತರದ ಗಡಿಯಲ್ಲಿ ಸಾವು ಬದುಕಿನ ಪ್ರಶ್ನೆ
ಉತ್ತರವ ಕೊಡಿರೆಂದು ಕರೆಯುತ್ತಿದೆ :
ಉತ್ತರಿಸೆ, ಪೌರುಷದ ಪರ್ವತವನೇರಿರಯ್,
ಕಡಿದು, ಎತ್ತರ, ಜಯದ ಶಿಖರವೆನ್ನುತಿದೆ.

ಉತ್ತರನ ಪೌರುಷದ ಭಾಷಣ ಕಲೆಯ ಬಿಸುಟು
ಪಾರ್ಥವಿಕ್ರಮವ ವ್ಯಾಸಂಗ ಮಾಡಿ ;
ಉತ್ತರಕೆ ಕಾದಿರುವ ಉತ್ತರದ ಮತ್ತರಿಗೆ
ಭಾರತದ ಧೀರಪಾಠದ ಕಲಿಕೆ ನೀಡಿ.

ಉತ್ತರದ ಶುಭಕೆ ಉತ್ತರವ ಭದ್ರತೆ ದಾರಿ
ದಕ್ಷಿಣೆಯನೀಡದಿರುವ ನೆಲವ ಹಗೆಗೆ ;
ಉತ್ತರಾರಿಯನಟ್ಟೆ ಭಜಿಸಿ ಪುರುಷೋತ್ತಮನ
ದಕ್ಷಿಣಪ್ರತಿರೋಧವೊಡ್ಡಲುತ್ತರ ವಿಜಯ
ಸಿದ್ಧ ನಮಗೆ, ಶತಸ್ಸಿದ್ಧ ನಮಗೆ–
ಯುದ್ಧ ಯಜ್ಞವಿದಾಗ, ಶುಭಮಕ್ಕೆ ಕಡೆಗೆ.

೧–೧೨–೧೯೬೨

# ಗೆಲವಕ್ಕೆ ನಾಡ ಬಾವುಟಕ್ಕೆ

ಗೆಲವಕ್ಕೆ ! ಗೆಲವಕ್ಕೆ !
ನಾಡ ಬಾವುಟಕ್ಕೆ !

ನೇಹ ನಲ್ಮೆ ಬೀರಿ
ವಿಶ್ವಮೈತ್ರಿ ಕೋರಿ
ಶಾಂತಿ ಪಥವ ತೋರಿ
ಮೆರೆವ ಬಾವುಟಕ್ಕೆ !

ನಮ್ಮ ಸಂಸ್ಕೃತಿಯು ಗೊತ್ತು
ನಾಡ ಸುಖದ ಬಿತ್ತು
ಪ್ರಾಣ ಪಣದ ಸೊತ್ತು
ಎನಿಪ ಬಾವುಟಕ್ಕೆ !

ಇದಕಿದೆ ಧರ್ಮವಿವಕ್ಷೆ
ಜೊತೆಗಿದೆ ದೈವದ ರಕ್ಷೆ
ಒಲ್ಲೆವು ದೈನ್ಯದ ಭಿಕ್ಷೆ
ನಮ್ಮ ಬಾವುಟಕ್ಕೆ !

ಹಿಮಗಿರಿಯ ಮುಡಿಯ ಮೇಲೆ
ಹಗೆಯ ಸಾಲು ಸಾಲೆ
ನುಗ್ಗಿದರೂ ಜಗ್ಗದಿಹ
ನಮ್ಮ ಬಾವುಟಕ್ಕೆ !

ನಮ್ಮ ಭಾವ ಭಕ್ತಿ
ನಮ್ಮ ಸರ್ವ ಶಕ್ತಿ
ನಮ್ಮ ತುಂಬು ರಕ್ತಿ
ಸಲಲಿ ಬಾವುಟಕ್ಕೆ !

೩೦-೧೧-೧೯೩೨

# ಜಯಮಾಲೆ

ನೋಡಮ್ಮ ಜಯಶೀಲೆ ! ಬಾಡದಾ ಜಯಮಾಲೆ !
ನೀಡುವೆವು ಧರಿಸಮ್ಮ ಭಾರತಾಂಬೆ ! ||ಪ||

ಕಡಿದಾರವೊಂದಾಯ್ತು, ಬಿಡಿ ಹೂವು ಕೂಡಿತ್ತು,
ಹತ್ತು ಬಣ್ಣದ ಹೂವು ಹಾರವಾಯ್ತು ;
ಕಡಲಾಚೆಗೂ ಇದರ ಕಂಪುಬಳ್ಳಿಯು ಹಬ್ಬಿ
ಮೆಚ್ಚುದುಂಬಿಯು ಸಾಲು ತೋರವಾಯ್ತು,

ನುಡಿನುಡಿಯ ಗಡಿಗಡಿಯ ಗೋಡೆಗಳನೊಡೆಹಾಕಿ
ಒಡಗೂಡಿ ನಿಂದಿಹೆವು ನಿನ್ನೊಡಲ ಕಾಯೆ,
ಪಡೆದ ಬಿಡುಗಡೆ ಭಾಗ್ಯ ಹೆರರೊಡವೆಯಾಗದೊಲು
ಹೋರಾಡ ನಿಂದಿಹೆವು, ಹರಸು, ತಾಯೆ,

ನಿನ್ನ ಮುಡಿಮಾಣಿಕಕೆ ಕೈಯಿಟ್ಟ ಹಗೆಯನ್ನು
ಹೊಡೆದಟ್ಟೆ ಕಟ್ಟಿಹೆವು ಕೈಗೆ ಕಂಕಣವ ;
ಬನ್ನ ತಾರೆವು ನಿನಗೆ, ಧರಿಸು ಮಾಲೆಯ ಮುದದೆ,
ನಿನ್ನ ಮುದ ನಮ್ಮ ಬಲ ಗೆಲಲು ರಣವ.

೧೯೬೩

## 'ರಾಘವ' ಕಾವ್ಯನಾಮದ
## ಎಂ. ವಿ. ಸೀತಾರಾಮಯ್ಯನವರ ಸಾಹಿತ್ಯಸೇವೆ

### ಕವಿತೆ

ಹಕ್ಕಿ ಹಾಡು
*ಕಾವ್ಯಾಲಾಪ
ಆ ಚಿತ್ರಗಳು ಮತ್ತು ಇತರ ಕಥನಕವನಗಳು
*ಹೂವಾಡಿಗಿತ್ತಿ (ಮಕ್ಕಳಿಗೆ)
*ಹಾವಾಡಿಗ (ಮಕ್ಕಳಿಗೆ)
ರಾಗ (ಪ್ರಣಯ ಗೀತೆಗಳು)
ಅಶೋಕಚಕ್ರ
ವಿಶ್ವಜ್ಯೋತಿ ಬಾಪು
ರಾಷ್ಟ್ರರಥ (ರಾಷ್ಟ್ರೀಯ)
ರಾಷ್ಟ್ರದಿನೋತ್ಸವ ಗೀತ
*ಮುಗಿಯದ ಮಾಯೆ
*ಗೀತಭಾರತಿ
*ಹಂಸಪಥ

### ಸಣ್ಣ ಕಥೆ

ಶಿಲಾಮುಖಿ (ರೂಪಾಂತರ)
ಯೌವನಸುಧೆ (ರೂಪಾಂತರ)
*ಮಾರ್ಗದರ್ಶಕ
ರತಿದೇವಿ ಮತ್ತು ಇತರ ಕಥೆಗಳು
ಬಿಸಿಲು – ಬೆಳುದಿಂಗಳು
ಕರುಣಾಲಹರಿ
*ಜೀವನನಾಟಕ
*ಗುಂಡಿನೇಟು ಮತ್ತು ಇತರ ಕಥೆಗಳು

### ಕಾದಂಬರಿ

ಭಾಗ್ಯಲಕ್ಷ್ಮಿ
ರಾಬಿನ್‌ಸನ್‌ಕ್ರೂಸೊ (೧) (ಭಾಷಾಂತರ)
ಮಾದನ ಮಗಳು
ಸೌಭಾಗ್ಯವತಿ
ನಂಜಿನಸವಿ
*ಸ್ನೇಹದ ಕಾಣಿಕೆ
*ತಾಯಿಬಯಕೆ
ಕುಂಕುಮ ಭಾಗ್ಯ
ಜೀವನದ ಜೊತೆಗಾತಿ
*ಜೂಡಿಲಕ್ಷ್ಮಿ (ಭಾಷಾಂತರ)
*ಏಳು ಇಪ್ಪಾರಿನ ಮನೆ(ಭಾಷಾಂತರ)

## ಸಾಹಿತ್ಯ ವಿಮರ್ಶೆ

*ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು

## ನಾಟಕ

*ಹೂವಿನ ಆಸೆ
ತೆರೆಮರೆಯ ಚಿತ್ರಗಳು
*ಸ್ವಯಂವರ
*ಕವಿಯ ಹೆಂಡತಿ
*ತೊಟ್ಟಿಲು ತೂಗದ ಕೈ
ಕರುಣೆಯ ಕುಡಿ (ಅಚ್ಚಿನಲ್ಲಿ)

## ಪ್ರಬಂಧ

ಹಿಡಿಹೂವು
*ಬಾಳಿನ ಬುತ್ತಿ
*ಧೂಮಲೀಲೆ ಮತ್ತು ಮುಗಿಲುಗಳು
ಗುರುಹಿರಿಯರು (ವ್ಯಕ್ತಿಚಿತ್ರಗಳು)
(ಅಚ್ಚಿನಲ್ಲಿ)

## ಸಂಪಾದಿತ

*ಶ್ರೀ ವಿಜಯಕೃತ
ಕವಿರಾಜಮಾರ್ಗಂ
*ಉದಯಾದಿತ್ಯಾಲಂಕಾರಂ
ವೀರ ಅಭಿಮನ್ಯು (ಕುಮಾರವ್ಯಾಸ
*ಅರ್ಚನ : ತಿಮ್ಮಪ್ಪದಾಸರ
ಪೂಜಾವಿಧಾನ ಕೀರ್ತನೆಗಳ

---